ಈ ಸಹಕಾರಿ ರಂಗದ ಸಕ್ಕರೆ ಕಾರ್ಖಾನೆಯನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರುಗಳಿಗಾಗಲಿ, ಷೇರುದಾರರಗಾಗಲಿ, ಕಾರ್ಯವ್ಯಾಪ್ತಿಯ ರೈತರುಗಳಿಗಾಗಲಿ ಹಾಗೂ ಸಾರ್ವಜನಿಕರಿಗಾಗಲಿ ಯಾವುದೇ ಉಪಯೋಗವಾಗುವುದಿಲ್ಲ ಕಾರಣ ಶ್ರೀ ಬಸವೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ, ಕಿರಿಗೇರಿ, ಹಾವೇರಿ ಜಿಲ್ಲೆ ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರಡಿಯಲ್ಲಿ ಸಮಾಪನೆಗೊಳಿಸಲು ದಿನಾಂಕ: 08.1.2007 ರಂದು ಕಾರ್ಖಾನೆಯ ಆಡಳಿತ ಮಂಡಳಿಯ ಎಲ್ಲಾ ನಿರ್ದೇಶಕರುಗಳಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿತ್ತು.

ದಿನಾಂಕ: 08.01.2007 ರಂದು ನೀಡಿರುವ ನೋಟೀಸ್‌ಗೆ ಸದರಿ ಕಾರ್ಖಾನೆಯ ಅಧ್ಯಕ್ಷರು ದಿನಾಂಕ: 25.1.2007 ರಂದು ಹಾಗೂ 14 ಜನ ನಿರ್ದೇಶಕರುಗಳು ಸಹಿ ಮಾಡಿರುವ ಒಂದೇ ವಿವರಣೆಯನ್ನು ದಿನಾಂಕ: 25.1.2007 ರಲ್ಲಿ ಸಲ್ಲಿಸಿದ್ದು ಸದರಿ ಉತ್ತರದಲ್ಲಿ ಅಧ್ಯಕ್ಷರು ಸಲ್ಲಿಸಿರುವ ವಿವರಣವೇ ತಮ್ಮ ವಿವರಣೆ ಎಂಬುದಾಗಿ ಪರಿಗಣಿಸುವಂತೆ ಆಡಳಿತ ಮಂಡಳಿ ಸದಸ್ಯರು ತಿಳಿಸಿರುತ್ತಾರೆ. ಅಧ್ಯಕ್ಷರು ತಮ್ಮ ವಿವರಣೆಯಲ್ಲಿ ಕಾರ್ಖಾನೆ ಸ್ಥಾಪನೆಗೆ ಅವಶ್ಯವಿರುವ 226 ಎಕರೆ ಭೂಮಿಯನ್ನು ಪಡೆಯಲಾಗಿದೆ. ಕಾರ್ಖಾನೆಯನ್ನು ಸಮಾಪನೆಗೊಳಿಸುವುದರಿಂದ ರೈತರ ಹಿತಾ ಶಕ್ತಿಗೆ, ಸಹಕಾರ ತತ್ವ ಮತ್ತು ಕಾನೂನಿಗೆ ವಿರೋಧವಾಗಿರುವೆಂದು ತಿಳಿಸಿರುತ್ತಾರೆ. ಆದರೆ ಸಕ್ಕರೆ ಕಾರ್ಖಾನೆಯ ಸ್ಥಾಪನೆ ಯೋಜನೆ ಬಗ್ಗೆ, ಯೋಜನೆಯ ಪ್ರಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಬಂಡವಾಳವನ್ನು ಕ್ರೋಢೀಕರಿಸುವ ಬಗ್ಗೆ ಯಾವುದೇ ನಿರ್ದಿಷ್ಟ ಕಾರ್ಯಕ್ರಮ ಸಲ್ಲಿಸಿರುವುದಿಲ್ಲ.

ಕಾರ್ಖಾನೆಯ ಆಡಳಿತ ಮಂಡಳಿಯ ನಿರ್ದೇಶಕರು ಕಾರ್ಖಾನೆಯ ಸ್ಥಾಪನೆ ಕಾರ್ಯ ಕೈಗೊಳ್ಳಲು ಅಶಕ್ತರಾಗಿ ಸರ್ಕಾರದ ಆರ್ಥಿಕ ನೆರವಿನ ಮೇಲೆ ಅವಲಂಬಿತರಾಗಿದ್ದು ಆಡಳಿತ ಮಂಡಳಿ ಕಾರ್ಖಾನೆ ಸ್ಥಾಪನೆಗೆ ಸಂಪನ್ಮೂಲಗಳ ಕ್ರೋಢೀಕರಿಸಲು ಯಾವುದೇ ಕ್ರಮವನ್ನು 1995ನೇ ಸಾಲಿನಿಂದ ಇದುವರೆಗೂ ಮಾಡದೇ ಇರುವುದು ಸ್ಪಷ್ಟವಾಗಿದೆ. ಸರ್ಕಾರದ ಆರ್ಥಿಕ ನೆರವು ನಿರೀಕ್ಷಿಸಿ ಕಾರ್ಖಾನೆಯನ್ನು ಸ್ಥಾಪನೆ ಮಾಡುವ ಕ್ರಮ ಸರಿಯಲ್ಲ ಸಂಘದ ಅಧ್ಯಕ್ಷರು ಹಾಗೂ ಆಡಳಿತ ಮಂಡಳಿ ಸದಸ್ಯರು ಕಾರ್ಖಾನೆ ಪ್ರಾರಂಭಿಸಲು ಅವಶ್ಯವಿರುವ ಬಂಡವಾಳವನ್ನು ಕ್ರೋಢೀಕರಿಸಲು ವಿಫಲರಾಗಿರುತ್ತಾರೆ. ಅಧ್ಯಕ್ಷರು ಸಲ್ಲಿಸಿರುವ ವಿವರಣೆ ಅರ್ಜಿಯನ್ನು ಕೂಲಂಕಷವಾಗಿ ಪರಿಶೀಲನೆ ಮಾಡಿದ್ದು ಆಡಳಿತ ಮಂಡಳಿಯವರು ಸಲ್ಲಿಸಿರುವ ಸಮಜಾಯಿಷಿಯನ್ನು ಒಪ್ಪಲು ಬರುವುದಿಲ್ಲ. ಸರ್ಕಾರ ಉಲ್ಲೇಖ (5)ರ ಪತ್ರದನ್ವಯ ಶ್ರೀ ಬಸವೇಶ್ವರ ಸಹಕಾರ ಸಕ್ಕರೆ ಕಾರ್ಖಾನೆ, ಕಿರಿಗೇರಿ (ಬೈರನಪಾದ), ಹಿರೇಕೆರೂರು, ಹಾವೇರಿ ಜಿಲ್ಲೆ ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72 ರಡಿಯಲ್ಲಿ ಸಮಾಪನೆಗೊಳಿಸಲು ಅನುಮೋದನೆ ನೀಡಿರುತ್ತೆ. ಕಾರ್ಖಾನೆಯು ನೋಂದಣಿಯಾಗಿ 11 ವರ್ಷ ಕಳೆದಿದ್ದರೂ ಸಹ ಕಾರ್ಖಾನೆಯನ್ನು ಪ್ರಾರಂಭಿಸುವಲ್ಲಿ ಮೂಲಭೂತ ಸೌಕರ್ಯಗಳನ್ನು ಪಡೆದುಕೊಳ್ಳುವಲ್ಲಿ ಹಾಗೂ ಕಾರ್ಖಾನೆಯನ್ನು ಸ್ಥಾಪಿಸುವ ಕಾರ್ಯಕ್ಕಾಗಿ ಆರ್ಥಿಕ ಸಂಪನ್ಮೂಲವನ್ನು ಕ್ರೋಢೀಕರಿಸುವಲ್ಲಿ ಆಡಳಿತ ಮಂಡಳಿ ವಿಫಲವಾಗಿರುವುದರಿಂದ ಮತ್ತು ಇಂತಹ ಕಾರ್ಖಾನೆಯನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರುಗಳಿಗಾಗಲಿ ಕಾರ್ಯ ವ್ಯಾಪ್ತಿಯ ರೈತರುಗಳಿಗಾಗಲಿ ಹಾಗೂ ಸಾರ್ವಜನಿಕರಿಗಾಗಲಿ ಯಾವುದೇ ಉಪಯೋಗವಾಗುವುದಿಲ್ಲವಾದ್ದರಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72 ರಡಿಯಲ್ಲಿ ಶ್ರೀ ಬಸವೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ ನಿ, ಕಿರಿಗೇರಿ (ಬೈರನಪಾದ) ಇದನ್ನು ಸಮಾಪನೆಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಎಸ್‌ಕೆ/ಇಎಸ್‌ಟಿಎಸ್/ಎಲ್‌ಕ್ಯೂಡಿ/47/2006–07, ದಿನಾಂಕ: 13ನೇ ಆಗಸ್ಟ್ 2007**

ಕರ್ನಾಟಕ ಸಂಘಗಳ ಕಾಯ್ದೆ 1959ರ ಕಲಂ 72(2) (ಬಿ) ರಡಿಯಲ್ಲಿ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರ ಚಲಾಯಿಸಿ ಬಿ.ಹೆಚ್.ಮಂಜುನಾಥ್ ಭಾ.ಆ.ಸೇ. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಆದ ನಾನು ಶ್ರೀ ಬಸವೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ ಕಿರಿಗೇರಿ (ಬೈರನಪಾದ), ಹಿರೇಕೆರೂರು ತಾಲ್ಲೂಕು ಹಾವೇರಿ ಜಿಲ್ಲೆ ಇದನ್ನು ಈ ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ ಆದೇಶಿಸಿರುತ್ತೇನೆ. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73 ರನ್ವಯ ಸದರಿ ಕಾರ್ಖಾನೆಯ ಸಮಾಪನಾಧಿಕಾರಿಯಾಗಿ ಸಮಾಪನಾಧಿಕಾರಿ ಗೌರಿಬಿದನೂರು ಸಹಕಾರ ಸಕ್ಕರೆ ಕಾರ್ಖಾನೆ ನಂ.32, ಚೌಗುಲೇ ಕಟ್ಟಡ, ಕ್ರೆಸೆಂಟ್ ರಸ್ತೆ, ಬೆಂಗಳೂರು ಇವರನ್ನು ಕೂಡಲೇ ಜಾರಿಗೆ ಬರುವಂತೆ ನೇಮಿಸಿದ್ದೇನೆ.

ಸಮಾಪನಾಧಿಕಾರಿಯವರು ಬಸವೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ), ಕಿರಿಗೇರಿ (ಬೈರನಪಾದ), ಹಿರೇಕೆರೂರು ತಾಲ್ಲೂಕು, ಹಾವೇರಿ ಜಿಲ್ಲೆ ಇದರ ಸಮಗ್ರ ಪ್ರಭಾರ ಮತ್ತು ಆಸ್ತಿಯನ್ನು ವಶಕ್ಕೆ ತೆಗೆದುಕೊಳ್ಳುವುದು ಮತ್ತು ಕಾರ್ಖಾನೆಯ ಆಸ್ತಿ ಜವಾಬ್ದಾರಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 74 ರನ್ವಯ ವಿಲೇವಾರಿ ಮಾಡಲು ಕೂಡಲೇ ಕ್ರಮವಿಡುವುದು ಹಾಗೂ ಕರ್ನಾಟಕ ಸಹಕಾರಿ ಸಂಘಗಳ ಕಾಯ್ದೆ 1959 ಕಲಂ 75 ರನ್ವಯ ಕಾರ್ಖಾನೆಯ ನೋಂದಣಿ ರದ್ಧತಿ ಬಗ್ಗೆ ಸಕ್ರಮ ಪ್ರಾಧಿಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವುದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ: 13.08.2007 ರಂದು ಹೊರಡಿಸಿದೆ.

**ಬಿ.ಹೆಚ್.ಮಂಜುನಾಥ್**

ಪಿ.ಆರ್.1106

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು,
ಬೆಂಗಳೂರು.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತಿಲಕ್‌ನಗರ, ನೆಹರು ಕ್ರೀಡಾಂಗಣ ಎದುರು, ಶಿವಮೊಗ್ಗ**

**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್–70/2007, ದಿನಾಂಕ: 10ನೇ ಆಗಸ್ಟ್ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1) ದೊಗ್ಗಳ್ಳಿ ದಾದಾಪೀರ್
ಬಿನ್ ಇಮಾಮ್ ಸಾಬ್
2) ಪರ್ವಿನ್ ಬಾಬು,
ಕೋಂ ದೊಗ್ಗಳ್ಳಿ ದಾದಾಪೀರ್
ಹಾಲಿ ವಾಸ: ಅರೆಬಿಳಚಿ ಗ್ರಾಮ
ಹೊಳೆಹೊನ್ನೂರು ಹೋಬಳಿ, ಭದ್ರಾವತಿ.

1) ಇಬ್ರಾಹಿಂ ಸಾಬ್, ಲಾರಿ ಚಾಲಕ,
ಮಲ್ಲಿಕಟ್ಟೆ ಗ್ರಾಮ, ಸಾಸ್ವೆಹಳ್ಳಿ, ಹೊನ್ನಾಳಿ ತಾ:
2) ಬಿ.ಕೆ.ರೋಷನ್ @ ಮಹ್ಮದ್‌ರೋಷನ್,
ಲಾರಿ ಮಾಲೀಕರು, ಉಪ್ಪಾರಪೇಟೆ ಬೀದಿ,
ಚನ್ನಗಿರಿ ಟೌನ್, ದಾವಣಗೆರೆ ಜಿಲ್ಲೆ.
3) ನ್ಯೂ ಇಂಡಿಯಾ ಅಶೂರೆನ್ಸ್ ಕಂ. ಲಿ.,
ನೆಹರು ರಸ್ತೆ, ಶಿವಮೊಗ್ಗ.

**ಅಧಿಸೂಚನೆ**

ಅರ್ಜಿದಾರರಾದ ದೊಗ್ಗಳ್ಳಿ ದಾದಾಪೀರ್ ಮತ್ತು ಇನ್ನೊಬ್ಬರು, ಹಾಲಿ ವಾಸ: ಅರೆಬೆಳಚಿ ಗ್ರಾಮ, ಹೊಳೆಹೊನ್ನೂರು ಹೋಬಳಿ, ಭದ್ರಾವತಿ ಇವರು ತಮ್ಮ ಮಗನಾದ ಖಲೀಲ್ 2ನೇ ಪ್ರತಿವಾದಿಗಳಾದ ಬಿ.ಕೆ.ರೋಷನ್ @ ಮಹ್ಮದ್ ರೋಷನ್, ಲಾರಿ ಮಾಲೀಕರು, ಉಪ್ಪಾರಪೇಟೆ ಬೀದಿ, ಚನ್ನಗಿರಿ ಟೌನ್, ದಾವಣಗೆರೆ ಜಿಲ್ಲೆ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 31.5.2006 ರಂದು ಸಂಭವಿಸಿದ ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತಳಾದ ತಮಗೆ ಪ್ರತಿವಾದಿ ಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೇ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದಂತೆ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದಲ್ಲಿ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಾಗಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದು ಎಂದು ತಿಳಿಸಲಾಗಿದೆ.

ಎಸ್.ವಿಜಯ್ ಕುಮಾರ್
Labour Officer and Commissioner For
Workmen, Compensation, Shimoga.

ಪಿ.ಆರ್. 1107

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ–1, ಬೆಂದೂರ್ ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್–39/2007ಎಫ್, ದಿನಾಂಕ: 30ನೇ ಜುಲೈ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1) ಶ್ರೀ ಜಯರಾಮ್ ಶೆಟ್ಟಿಗಾರ್,
ಬಿನ್ ಕೊರಗಪ್ಪ ಶೆಟ್ಟಿಗಾರ್, ಪ್ರಾಯ: 46,
2) ಶ್ರೀಮತಿ ಜಲಜಾಕ್ಷಿ
ಕೋಂ ಜಯರಾಮ್ ಶೆಟ್ಟಿಗಾರ್, ಪ್ರಾಯ: 39,
3) ಶ್ರೀಮತಿ ಪುಷ್ಪಾವತಿ,
D/o ಜಯರಾಮ್ ಶೆಟ್ಟಿಗಾರ್, ಪ್ರಾಯ: 20
ವಾಸ: ಎ.ಕೆ.ಎಸ್. ನಿವಾಸ್, ಅಡ್ಯಾರ್ ಪೋಸ್ಟ್ &
ವಿಲೇಜ್, ಮಂಗಳೂರು ತಾ:

1) ದಿ ಚೇರ್‌ಮನ್,
ಸಿಂಡಿಕೇಟ್ ಬ್ಯಾಂಕ್ ಹೆಡ್ ಆಫೀಸ್, ಸಿಂಡಿಕೇಟ್
ಹೌಸ್, ಮಣಿಪಾಲ, ಉಡುಪಿ ಜಿಲ್ಲೆ,
2) ದಿ ಪ್ರೊಫ್ರ್ಯಾಟರ್,
ಮೆ: ವಿಜಯ ಎಲೆಕ್ಟ್ರಿಕಲ್ಸ್, ನಿಯರ್ ಹೋಟೆಲ್
ಮನೋಹರ ವಿಲಾಸ್, ಕಂಕನಾಡಿ, ಮಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ಜಯರಾಮ್ ಶೆಟ್ಟಿಗಾರ್ ಇವರು ತಮ್ಮ ಮಗನಾದ ಕುಮಾರ್ ವಿನಯ್ ಇವರು 1ನೇ ಪ್ರತಿವಾದಿಗಳಾದ ದಿ ಚೇರ್‌ಮನ್ ಸಿಂಡಿಕೇಟ್ ಬ್ಯಾಂಕ್ ಹೆಡ್ ಆಫೀಸ್, ಸಿಂಡಿಕೇಟ್ ಹೌಸ್, ಮಣಿಪಾಲ, ಉಡುಪಿ ಜಿಲ್ಲೆ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 10.03.2007 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಪಿ.ಆರ್.1108 ಆಯುಕ್ತರು, ದ.ಕ. ಉಪ ವಿಭಾಗ-1, ಮಂಗಳೂರು.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-2 ವಿಜಾಪೂರ ಜಿಲ್ಲೆ, ವಿಜಾಪೂರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಎಸ್‌ಆರ್-89/2007, ದಿನಾಂಕ: 2ನೇ ಆಗಸ್ಟ್ 2007**

**ಅರ್ಜಿದಾರರು:**
1) ದೇವಿಸಿಂಗ ಮಾನಸಿಂಗ ರಾಜಪೂತ
@ ಶಿಹಿರೇ, ವಯಸ್ಸು: 58 ಉದ್ಯೋಗ: ಕೂಲಿ
ಸೌಕೀನ: ಜಲನಗರ ವಿಜಾಪುರ.
2) ಕೌಸಲ್ಯಾ ದೇವಿಸಿಂಗ ರಾಜಪೂತ
@ ಶಿಹಿರೇ, ವಯಸ್ಸು 48, ಉದ್ಯೋಗ: ಮನೆಕೆಲಸ
ಸೌಕೀನ: ಜಲನಗರ, ವಿಜಾಪುರ.

**ವಿರುದ್ಧ**

**ಪ್ರತಿವಾದಿಗಳು:**
1) ಲುಕಮಾನ ಖಾನ ಬಿಸ್ಮಿಲ್ಲಾ ಖಾ
ಲಾರಿ ಮಾಲೀಕರು ನಂ. ಜಿಜೆ-2-ಟಿ-8043
ಸೌಕೀನ: ಹುಸೇನ್ ಕಾಲನಿ, ಗಾರಖೇಡಾ
ತಾಲ್ಲೂಕಾ: ಔರಂಗಾಬಾದ ಜಿಲ್ಲೆ, ಔರಂಗಾಬಾದ.
2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ.,
ಸಂಗಮೇಶನಗರ, ಗುಲ್ಬರ್ಗಾ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ರಾಮ ದೇವಿಸಿಂಗ ರಾಜಪೂತ @ ಶಿಹಿರೇ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 21.06.2007 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ**
ಪಿ.ಆರ್.1109 ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಉಪವಿಭಾಗ-2 ವಿಜಾಪೂರ..

**IN THE COURT OF THE VIII ADDL. CHIEF METROPOLITAN MAGISTRATE, BANGALORE CITY**

It is hereby notified for the information of the public that the under mentioned Two wheeler, and Three wheeler, which is in the custody Sanjayanagara Police station, Bangalore city has unclaimed shell be Confiscated to the Government and disposed to law if not claimed by the owner with proof of ownership with in three month from the date of publication of this notification.

| Sl. NO. | C.Mise No. | P.F. NO. | Vehicle No. | ENG & CHA No. | Nature of property |
|---|---|---|---|---|---|
| 1 | 760/07 | 50/07 | KA-01-Q6809 | Eng.No. 1L5209687<br>Cha No. 89L1LS-209587 | Yamaha M/C |
| 2 | 757/07 | 48/07 | KA-04-EL9089 | Cha-No. DUFBMC56402 | BAJAJ City.100 |
| 3 | 771/07 | 52/07 | CKO-8805 | Eng No. W-06E-105289 | BAJAJ s/c |
| 4 | 763/07 | 51/07 | KA-05-EF-7351 | Eng No. CFGBHA21668 | Sapair Scoty |
| 5 | 772/07 | 53/07 | KA-05-EA-9716 | Cha.No. DDFBFC63228 | Klylibar |
| 6 | 773/07 | 54/07 | KA-03-EB3453 | Cha.No. DDFBGC15907 | Klylibar |

| Sl. NO. | C.Mise No. | P.F. NO. | Vehicle No. | ENG & CHA No. | Nature of property |
|---|---|---|---|---|---|
| 7 | 785/07 | 56/07 | TN-09-X-7638 | Eng.No. 719674NIE-NC | Knitic Honda |
| 8 | 786/07 | 57/07 | MEJ-6034 | Eng.No. 67147 | BAJAJ Scutar |
| 9 | CCNo. 21009/03 | 60/01 | KA-05-1443 | | AUTO |
| 10 | CCNo. 21007/03 | 82/01 | CAS-776 | | AUTO |
| 11 | CCNo. 21007 | 82/01 | CAS-626 | | AUTO |

VIIIth Addl. Chief Metropolitan Magistrate,
Bangalore.

P.R.1110

**IN THE COURT OF 5th ADDL. CHIEF METROPOLITAN MAGISTRATE, BANGALORE CITY**

It is hereby notified for the information of the public that the under mentioned two wheelers which are in the custody of Chandralayout Police Station, Bangalore City, As unclaimed shall be confiscated to the Government and disposed of according to law if not claimed by the owner with proof of ownership within one months from the date of the publication of this notification.

| ಕ್ರ. ಸಂ. | ಸೀಮಸ್ ನಂ. | ಪಿ.ಎಫ್. ನಂ. | ವಶಪಡಿಸಿಕೊಂಡ ದಿನಾಂಕ | ಮಾಲಿನ ವಿವರ |
|---|---|---|---|---|
| 1 | 163/2000 | 24/00 | 23.03.2000 | Bajaj Vespa Scooter, No. MED-4858, Green Colour |
| 2 | 886/03 | 95/03 | 04.10.2006 | Maruthi Van, No. KA-03, M-9163 |
| 3 | 701/06 | 144/06 | 14.10.2006 | Suzuki Samurai, No. KA-02, V-910, Black Colour, Chassis No.77011748300, Eng.No. 770M7701M794280 |
| 4 | 702/06 | 145/06 | 14.10.2006 | TVS Scooty ES, No. KA-05, EH-3640, Red Colour, Eng No. Ko2AM670309 |
| 5 | 703/06 | 146/06 | 14.10.2006 | Hero Honda Splender, No. KA-04, Y-621, Black Colour, Chassis No.98G19F03280, Eng.No. 98G17E03484 |
| 6 | 704/06 | 147/06 | 14.10.2006 | Bajaj Chetak Scooter, No. KA-02, EE-7995, Grey Colour, Chassis No. 06CBHMO8603, Eng.No. CDEBHM80796. |
| 7 | 705/06 | 148/06 | 14.10.2006 | Kenetic Honda, No. KA-02, L-1552, Black Colour, Eng.No. 471218NIEKM, |
| 8 | 706/06 | 149/06 | 14.10.2006 | Kenetic Honda, No. KA-04, S-1474, Black Colour, Eng.No. 761715NJE |
| 9 | 707/06 | 150/06 | 14.10.2006 | Auto Rikshaw, Back Engine, No.KA-40, B-4295, Black Colour, No Top, Chassis No.24FBJE31862, Eng.No.AEMBJE27268. |

Vth Addl. Chief Metropolitan Magistrate,
Bangalore.

P.R.1113

**ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಮತ್ತು ಶಿಸ್ತು ಪ್ರಾಧಿಕಾರ**

**ಸಂಖ್ಯೆ: ಆಸಾಂನಿ–68/ಆಡಳಿತ–2/11084–94/2003, ಬೆಂಗಳೂರು, ದಿನಾಂಕ: 7ನೇ ಆಗಸ್ಟ್ 2007**

ವಿಷಯ: ಶ್ರೀ ಸಿ.ಎಸ್. ಕುಲಕರ್ಣಿ, ಬೆರಳಚ್ಚುಗಾರರು (ಪ್ರಸ್ತುತ ಅಮಾನತಿನಲ್ಲಿ) ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ, ಇವರ ಅನಧಿಕೃತ ಗೈರು ಹಾಜರಾತಿ ಕುರಿತು.

ಉಲ್ಲೇಖ:
1) ಈ ನಿರ್ದೇಶನಾಲಯದ ಇದೇ ಕ್ರಮಾಂಕ ಆದೇಶದ ದಿನಾಂಕ: 29.01.2007.
2) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರ ಮೇರೆಗೆ ಶ್ರೀ ಸಿ.ಎಸ್. ಕುಲಕರ್ಣಿ, ಅಮಾನತ್ತಿನಲ್ಲಿರುವ ಬೆರಳಚ್ಚುಗಾರರಿಗೆ ನೀಡಲಾದ ಕಾರಣ ಕೇಳುವ ಜ್ಞಾಪನ ಸಂಖ್ಯೆ: ಆಸಾಂನಿ/68/ಆಡಳಿತ 2/2003/73–74, ದಿನಾಂಕ: 16.04.2007.
3) ಶ್ರೀ ಸಿ.ಎಸ್. ಕುಲಕರ್ಣಿ ಆರೋಪಿತ ಮತ್ತು ಅಮಾನತ್ತಿನಲ್ಲಿರುವ ಬೆರಳಚ್ಚುಗಾರರು ಅವರ ವಿಳಾಸವಿಲ್ಲದೆ ಸಲ್ಲಿಸಲಾದ ಮನವಿ ದಿನಾಂಕ: 15.05.2007.

ಪ್ರಸ್ತಾವನೆ:

ಶ್ರೀ ಸಿ.ಎಸ್. ಕುಲಕರ್ಣಿ, ಬೆರಳಚ್ಚುಗಾರರು, ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿ, ದಾವಣಗೆರೆ, ಇವರು ದಿನಾಂಕ: 16.11.2006 ರಿಂದ ಅಧಿಕೃತ ಗೈರು ಹಾಜರಾಗಿದ್ದರಿಂದ ಉಲ್ಲೇಖ (1) ರಲ್ಲಿನ ಆದೇಶದಲ್ಲಿ ಅವರ ವಿರುದ್ಧ ಇಲಾಖೆ ವಿಚಾರಣಾ ಕಾಯ್ದಿರಿಸಿ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ದಾವಣಗೆರೆ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಮೂಲಕ ಉಲ್ಲೇಖ (2) ರಲ್ಲಿ ತಿಳಿಸಲಾದ ಕಾರಣ ಕೇಳುವ ಜ್ಞಾಪನದಲ್ಲಿ ಅವರ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಅವರ ವಿವರಣೆಯನ್ನು 15 ದಿನಗಳ ಒಳಗಾಗಿ ಸಲ್ಲಿಸಲು ಸೂಚಿಸಲಾಗಿತ್ತು. ಸದರಿ ಆರೋಪಿತ ಬೆರಳಚ್ಚುಗಾರರು (Accused Government Official) ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳಿಗೆ ಜೀವನಾಂಶ ಭತ್ಯೆ ಪಡೆಯುವುದಕ್ಕಾಗಿ ನೀಡಲಾದ ವಿಳಾಸಕ್ಕೆ ಹಾಗೂ ಅವರ ಸೇವಾ ಪುಸ್ತಕದಲ್ಲಿ ಲಭ್ಯವಿರುವ ವಿಳಾಸಕ್ಕೆ ಈ ಕಾರಣ ಕೇಳುವ ಜ್ಞಾಪನವನ್ನು ಅವರಿಗೆ ತಲುಪಿಸಲು ಪ್ರಯತ್ನಿಸಲಾದ ಸಂದರ್ಭಗಳಲ್ಲಿ ಸದರಿ ಆರೋಪಿತ ನೌಕರರು ಆ ವಿಳಾಸಗಳಲ್ಲಿ ಲಭ್ಯವಿರುವುದಿಲ್ಲವೆಂದು ಕಂಡು ಬಂದಿರುವುದಾಗಿ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳು ಅವರ ಪತ್ರದ ದಿನಾಂಕ: 8.5.2007 ರಲ್ಲಿ ವರದಿ ಮಾಡಿಕೊಂಡಿರುತ್ತಾರೆ. ಸದರಿ ಆರೋಪಿತ ಬೆರಳಚ್ಚುಗಾರರು ಕಾರಣ ಕೇಳುವ ಜ್ಞಾಪನವನ್ನು ದಿನಾಂಕ: 8.5.2007 ರಂದು ಪಡೆದುಕೊಂಡು ಉಲ್ಲೇಖ (3) ರಲ್ಲಿನ ಅವರ ಲಿಖಿತ ಹೇಳಿಕೆ/ವಿವರಣೆಯನ್ನು ಪರಿಶೀಲಿಸಲಾಗಿ ಅವರು ಸಲ್ಲಿಸಿರುವ ವಿವರಣೆ ಸತ್ಯಕ್ಕೆ ದೂರವಾಗಿರುವುದರಿಂದ ಹಾಗೂ ಪರಿಗಣಿಸಲು ಸೂಕ್ತವಿಲ್ಲವೆಂದು ನಿರ್ಧರಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸುವುದು ಸೂಕ್ತವೆಂದು ಕಂಡುಬರುತ್ತದೆ.

ಆರೋಪಿತ ನೌಕರರು ಸಲ್ಲಿಸಿದ ದಿನಾಂಕ: 15.05.2007ರ ಲಿಖಿತ ಹೇಳಿಕೆಯನ್ನು ಪರಿಶೀಲಿಸಲಾಗಿ ಅವರ ವಿಳಾಸ (Address) ನಮೂದಿಸದೇ ಸಲ್ಲಿಸಿರುವುದನ್ನು ಪರಿಶೀಲಿಸಲಾಗಿ ಹಾಗೂ ಇದಕ್ಕೂ ಪೂರ್ವದಲ್ಲಿ ಅವರೇ ನೀಡಲಾದ ಸ್ಥಳೀಯ ವಿಳಾಸಕ್ಕೆ ಹಾಗೂ ಅವರ ಸೇವಾ ಪುಸ್ತಕದಲ್ಲಿ ಲಭ್ಯವಿರುವ ವಿಳಾಸಕ್ಕೆ ಮಾಡಲಾದ ಎಲ್ಲಾ ಪತ್ರ ವ್ಯವಹಾರಗಳು ಆ ವಿಳಾಸಗಳಲ್ಲಿ ಸದರಿ ಅವರು ವಾಸವಿಲ್ಲವೆಂದು ಗಮನಕ್ಕೆ ಬಂದಿರುವುದರಿಂದ, ಸದರಿ ಅವರು ಗಂಭೀರ ಸ್ವರೂಪದ ದುರ್ನಡತೆಯನ್ನು ಪ್ರದರ್ಶಿಸಿರುವುದಲ್ಲದೆ ಸರ್ಕಾರಿ ನೌಕರರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತಾರೆ.

ಅವರ ವಿವರಣೆಯಲ್ಲಿನ ಇತರೇ ವಿಷಯಗಳು ಸಂಪೂರ್ಣವಾಗಿ ನಂಬಲು ಅನರ್ಹವಾಗಿದ್ದು ವಿಶೇಷವಾಗಿ 3ನೇ ಆರೋಪಕ್ಕೆ ಸಂಬಂಧಿಸಿದಂತೆ ಅವರ ಲಿಖಿತ ಹೇಳಿಕೆಯ 3ನೇ ಪುಟದಲ್ಲಿ **"ನಾನು ಕಳೆದ 31 ವರ್ಷದಿಂದ ಬೆರಳಚ್ಚುಗಾರರಾಗಿ ಸೇವೆ ಸಲ್ಲಿಸುತ್ತಿದ್ದು, ನನ್ನ ಸೇವೆಯಲ್ಲಿ ಯಾವುದೇ ಕಾಗದ ಪತ್ರವನ್ನು ನಾನು ತೆಗೆದುಕೊಂಡು ಹೋಗಿಲ್ಲ ಅವರಿಂದ ನನಗೆ ಯಾವುದೇ ಪ್ರಯೋಜನವಿರುವುದಿಲ್ಲವೆಂದು"** ನಮೂದಿಸಿರುವುದು ಸಂಪೂರ್ಣವಾಗಿ ನಂಬಲು ಅನರ್ಹವಾಗಿದ್ದು ಮೇಲಾಧಿಕಾರಿಗಳನ್ನು ತಪ್ಪುದಾರಿಗೆ ಎಳೆಯುವ ಪ್ರಯತ್ನವಾಗಿದೆ. (Misguiding the higher Officer) ಶ್ರೀ ಸಿ.ಎಸ್.ಕುಲಕರ್ಣಿ ಅಮಾನತ್ತಿನಲ್ಲಿರುವ ಬೆರಳಚ್ಚುಗಾರರು ಇವರ ಸೇವಾ ಚರಿತ್ರೆಯನ್ನು (Service History) ಪರಿಶೀಲಿಸಲಾಗಿ ಸದರಿ ಅವರು ರಾಯಚೂರು ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 11.10.1993 ರಂದು ಆ ಕಛೇರಿಗೆ/ಸರ್ಕಾರಕ್ಕೆ ಸಂಬಂಧಿಸಿದ ರೂ.3049/– ರ ಚೆಕ್ಕನ್ನು ಸದರಿ ಅಮಾನತ್ತಿನಲ್ಲಿರುವ ಶ್ರೀ ಸಿ.ಎಸ್.ಕುಲಕರ್ಣಿ ಅವರಿಗೆ ಸ್ಥಳೀಯ ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್‌ನಲ್ಲಿ ನಗದೀಕರಣಕ್ಕಾಗಿ ನೀಡಿದ್ದು, ಆ ಚೆಕ್ಕನ್ನು ನಗದೀಕರಿಸಿ ಆ ಹಣವನ್ನು ಕಛೇರಿಗೆ ಒಪ್ಪಿಸದೇ ಅದೇ ದಿನಾಂಕದಿಂದ ತಲೆ ಮರೆಸಿಕೊಂಡು ಹೋಗಿ ನಂತರ ದಿನಾಂಕ: 14.01.1993 ರಂದು ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳು ರಾಯಚೂರು, ಇವರಿಗೆ ಅಸ್ತಿತ್ವದಲ್ಲಿರುವಂತಹ ವಿಳಾಸವೊಂದನ್ನು ನಮೂದಿಸಿ (ಶ್ರೀ ಸಿ.ಎಸ್.ಕುಲಕರ್ಣಿ, ಬಿ–10–6) ಜೆ ಎನ್ ಪಿಟಿಸಿ ಟೌನ್‌ಸಿಫ್, ಯು.ಆರ್.ಎನ್.ಎ.) ತನ್ನಿಂದಾದ ತಪ್ಪನ್ನು ಮಾನವೀಯ ದೃಷ್ಟಿಯಿಂದ ಮನ್ನಿಸುವಂತೆ ತಿಳಿಸಿ ರೂ.3049/–ರ ಒಂದು ಡಿಮ್ಯಾಂಡ್ ಡ್ರಾಫ್ಟ್‌ನ್ನು ಕಳುಹಿಸಿದ್ದರು. ಸದರಿಯವರ ಈ ದುರ್ನಡತೆ, ಸರ್ಕಾರದ ಹಣದ ದುರುಪಯೋಗ ಇತ್ಯಾದಿ ಆರೋಪಗಳ ಮೇಲೆ ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿಟ್ಟು ಸದರಿ ಅವರ ವಿರುದ್ಧ ಗೌರವಾನ್ವಿತ ಪ್ರಧಾನ ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಯಚೂರು ಇಲ್ಲಿ ಕ್ರಿಮಿನಲ್ ಮೊಕದ್ದಮೆಯನ್ನು (Criminal case No.202/95) ದಾಖಲಾಗಿತ್ತು ಆದರೆ ಅದೇ ಕಛೇರಿಯ ಪ್ರಥಮ ದರ್ಜೆ ಸಹಾಯಕರು ಹಾಗೂ ನಗದು ಶಾಖೆಯ ಕರ್ತವ್ಯ ನಿರ್ವಹಿಸುತ್ತಿದ್ದ ಹಾಗೂ ಪ್ರಸ್ತುತ ಅದೇ ಕಛೇರಿಯಲ್ಲಿ ಅಧೀಕ್ಷಕರಾಗಿ ಮುಂದುವರೆಯುತ್ತಿರುವ ಶ್ರೀ ಶ್ರೀನಿವಾಸ ಗೋಲ್ಡ್‌ಸ್ಮಿತ್ ಅವರು ಈ ವಿಷಯದ ಕುರಿತು ಕಡತ ನಿರ್ವಹಿಸಿದ್ದಾಗ್ಯೂ ಹಾಗೂ ಶ್ರೀ ಶ್ರೀನಿವಾಸ ಗೋಲ್ಡ್‌ಸ್ಮಿತ್ ಅವರು ಮೇಲಿನ ಕ್ರಿಮಿನಲ್ ಮೊಕದ್ದಮೆಯಲ್ಲಿ ಪ್ರಮುಖ ಸಾಕ್ಷಿದಾರರಾಗಿದ್ದು, (Key witness) ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಗೌರವಾನ್ವಿತ ನ್ಯಾಯಾಲಯವು ದಿನಾಂಕ: 20.01.2006 ರಂದು ನೀಡಲಾದ ತೀರ್ಪಿನಲ್ಲಿ ಇನ್ನಿತರ ಅಂಶಗಳೊಂದಿಗೆ 4ನೇ ಪ್ರಮುಖ ಸಾಕ್ಷಿದಾರರ ಕುರಿತು [ಶ್ರೀ ಶ್ರೀನಿವಾಸ ಗೋಲ್ಡ್‌ಸ್ಮಿತ್, ಅಧೀಕ್ಷಕರು (ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿ, ರಾಯಚೂರು)] "he has also not fully supported the case of the prosecution in the above circumstances he (i.e. Sri Srinivas Goldsmith) was treated as partly hostile witness" ಶ್ರೀ ಶ್ರೀನಿವಾಸ ಗೋಲ್ಡ್‌ಸ್ಮಿತ್ ಇವರು (Key witness) ಆಗಿದ್ದರೂ ಸರ್ಕಾರದ ವಿರುದ್ಧ ಸಾಕ್ಷಿ ಹೇಳಿದ್ದರಿಂದ ಸದರಿ ಅಮಾನತ್ತಿನಲ್ಲಿರುವ ಬೆರಳಚ್ಚುಗಾರರಾದ ಶ್ರೀ ಸಿ.ಎಸ್.ಕುಲಕರ್ಣಿ ಅವರನ್ನು ಸರ್ಕಾರದ ಹಣದ ದುರುಪಯೋಗದ ಆಪಾದನೆ

ಮೇಲೆ ಅವರ ವಿರುದ್ಧ ಹೂಡಲಾದ ಕ್ರಿಮಿನಲ್ ಮೊಕದ್ದಮೆಯಿಂದ ಮುಕ್ತಗೊಳಿಸಿರುವುದು ಕಂಡು ಬರುತ್ತದೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಸದರಿ ಅವರನ್ನು ದಿನಾಂಕ: 29.09.1999 ರಿಂದ ದಿನಾಂಕ: 22.09.1994ರ ವರೆಗೆ (ಸುಮಾರು 5 ವರ್ಷಗಳಿಗಿಂತಲೂ ಹೆಚ್ಚಿನ ಅವಧಿ) ಅಮಾನತ್ತಿನಲ್ಲಿರಿಸಲಾಗಿತ್ತು. ಅಲ್ಲದೇ ದಿನಾಂಕ: 19.04.1994 ರಿಂದ 29.04.1997ರ ವರೆಗೆ ಅವರು ಅನಧಿಕೃತ ಗೈರುಹಾಜರಾಗಿದ್ದು, ಈ ಬಗ್ಗೆ ಕೈಗೊಳ್ಳಲಾದ ಇಲಾಖಾ ವಿಚಾರಣೆಯಲ್ಲಿ ಗೈರುಹಾಜರಾಗಿದ್ದರಿಂದ ಈ ಅವಧಿಯನ್ನು ಅನಧಿಕೃತ ಗೈರುಹಾಜರಾತಿ ಎಂದು ಪರಿಗಣಿಸಿ ಅವರ 2 ವರ್ಷಗಳ ವೇತನ ಬಡ್ತಿಗಳನ್ನು ಖಾಯಂಆಗಿ ತಡೆಹಿಡಿಯಲಾಗಿತ್ತು.

ಮೇಲೆ ನಮೂದಿಸಲಾದ ಅವರ ಪ್ರಮುಖ ಸೇವಾ ಚರಿತ್ರೆಗಳಲ್ಲದೇ 1978 ರಿಂದ (ಅವರ ಸರ್ಕಾರದ ಸೇವೆ ಪ್ರಾರಂಭದಿಂದ ಅನಧಿಕೃತ ಗೈರು ಹಾಜರಾತಿಯನ್ನು ನಿರಂತರವಾಗಿ ಮುಂದುವರೆಸಿಕೊಂಡಿದ್ದು, ಪ್ರಸ್ತುತ ದಿನಾಂಕ: 16.11.2006 ರಿಂದ ಅನಧಿಕೃತ ಗೈರುಹಾಜರಾಗಿದ್ದರಿಂದ ಹಾಗೂ ಇನ್ನಿತರ ಆರೋಪಗಳಿಗೆ ಸಂಬಂಧಿಸಿದಂತೆ ಅವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 97–ಎ ಮತ್ತು ನಿಯಮ 98(1)ರ ಅನ್ವಯ ಅಮಾನತ್ತಿನಲ್ಲಿರುವ ಸರ್ಕಾರಿ ನೌಕರನು ಖಾಸಗಿಯಾಗಿ ಅಥವಾ ಸರ್ಕಾರಿ ಹಿತಾಸಕ್ತಿಯನ್ನು ಹೊಂದಿರುವ ಯಾವುದೇ ಸಂಸ್ಥೆಗಳಲ್ಲಿ ಉದ್ಯೋಗದಲ್ಲಿ ತೊಡಗಿರತಕ್ಕದ್ದಲ್ಲ ಹಾಗೂ ಕೇಂದ್ರ ಸ್ಥಾನದಲ್ಲಿರುವುದು ಕಡ್ಡಾಯವಾಗಿದ್ದು ಈ ಬಗ್ಗೆ ಜೀವನಾಂಶ ಭತ್ಯೆ ಪಡೆಯುವುದಕ್ಕೆ ಒಂದು ದೃಢೀಕರಣ ಪತ್ರ ನೀಡಬೇಕಾಗಿರುತ್ತದೆ. ಸದರಿ ಅವರು ಪ್ರತಿಯೊಂದು ಹಂತದಲ್ಲಿ ಬೇರೆ ಬೇರೆ ವಿಳಾಸ ನೀಡಿ ಮೇಲಾಧಿಕಾರಿಗಳನ್ನು ತಪ್ಪುದಾರಿಗೆ ಎಳೆಯುವ ಪ್ರವೃತ್ತಿ ಹೊಂದಿದ್ದರಿಂದ ಅವರಿಗೆ ಜೀವನಾಂಶ ಭತ್ಯೆಯನ್ನು ಪ್ರತಿ ತಿಂಗಳು ಸಂದಾಯ ಸಾಧ್ಯವಾಗದೇ ಇರುವುದು ಕಂಡುಬರುತ್ತದೆ. ಅಮಾನತ್ತಿನಲ್ಲಿರುವ ಸದರಿಯವರು ಅವರ ಕುಟುಂಬದವರು ರಾಯಚೂರಿನಲ್ಲಿರುವುದು ಅವರ ಇತ್ತೀಚಿನ ಮನವಿಯಲ್ಲಿ ತಿಳಿಸಲಾಗಿದ್ದರೂ, ಅವರ ಪತ್ನಿಯು ಅವರ ವಿರುದ್ಧ ವಿವಾಹ ವಿಚ್ಛೇದನ ಪ್ರಕರಣ ಹೂಡಿದ್ದರಲ್ಲದೆ ಸದರಿ ಶ್ರೀ ಸಿ.ಎಸ್.ಕುಲಕರ್ಣಿ, ಅಮಾನತ್ತಿನಲ್ಲಿರುವ ಬೆರಳಚ್ಚುಗಾರರ ವಿರುದ್ಧ ಕುಟುಂಬದ ನಿಷ್ಕಾಳಜಿ ಅವರ ಅನೇಕ ದುರಭ್ಯಾಸಗಳ ಬಗ್ಗೆ ಹಾಗೂ ಇನ್ನಿತರ ಅನೇಕ ದೂರುಗಳನ್ನೊಳಗೊಂಡಂತೆ ಮನವಿಯನ್ನು ಸಲ್ಲಿಸಿದ್ದರು.

ಒಟ್ಟಾರೆ ಸದರಿ ಅವರು ಅವರ ಸೇವಾ ಪ್ರಾರಂಭದಿಂದ (ಜುಲೈ 1978) ನಿರಂತರವಾಗಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾತಿಯಾಗುವ ಪ್ರವೃತ್ತಿಯನ್ನು ಮುಂದುವರೆಸಿದ್ದಲ್ಲದೆ ಸರ್ಕಾರದ ಹಣದ ದುರುಪಯೋಗ, ಇತ್ಯಾದಿ ಕಾರಣಗಳಿಂದ ಸೇವೆಯಿಂದ 3ನೇ ಅವಧಿಗೆ ಅಮಾನತ್ತುಗೊಳಿಸಲಾಗಿದೆಯಾದ್ದರಿಂದ ಹಾಗೂ ಪ್ರಸ್ತುತ ಪ್ರಕರಣಕ್ಕೆ ಸಂಬಂಧಿಸಿದಂತೆ, "ಯಾವುದೇ ವಿಳಾಸ ನಮೂದಿಸದೇ" ಸಲ್ಲಿಸಲಾದ ಅವರ ಲಿಖಿತ ಹೇಳಿಕೆಯಲ್ಲಿನ ಅಂಶಗಳು ನಂಬಲು ಹಾಗೂ ಪರಿಗಣಿಸಲು ಅನರ್ಹವೆಂದು ಪರಿಗಣಿಸಿ, ಈ ಪ್ರಕರಣದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಕಛೇರಿ ಆದೇಶದ ಸಂಖ್ಯೆ: ಆಡಳಿತ/312/2007–08**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ 11ನೇ ನಿಯಮದ ಉಪ ನಿಯಮ(5)(ಎ) ಅನ್ನು ಓದಿಕೊಂಡಂತೆ 3ನೇ ಉಪ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಸಿ.ಎಸ್. ಕುಲಕರ್ಣಿ ಪ್ರಸ್ತುತ ಅಮಾನತ್ತಿನಲ್ಲಿರುವ ಬೆರಳಚ್ಚುಗಾರರು ಇವರ ವಿರುದ್ಧ ಮಾಡಲಾದ ಆರೋಪಗಳ ಬಗ್ಗೆ ಅದೇ ನಿಯಮಗಳ ನಿಯಮ 11ರ ಅನ್ವಯ ಇಲಾಖಾ ವಿಚಾರಣೆ ಕೈಗೊಳ್ಳಲು ಶ್ರೀ ಎನ್.ಎಸ್.ನಾಗಶೆಟ್ಟಿ, ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳು, ಹಾವೇರಿ ಜಿಲ್ಲೆ, ಹಾವೇರಿ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದೆ.

ಈ ವಿಚಾರಣೆಯಲ್ಲಿ ಇಲಾಖಾ ಪರವಾಗಿ ಈ ಪ್ರಕರಣವನ್ನು ವಿಚಾರಣಾ ಅಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ 11ನೇ ನಿಯಮದ (5)ನೇ ಉಪ ನಿಯಮ (ಸಿ)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಶ್ರೀ ಗಂಗಾಧರ ಟಿ. ಎಮ್ಮಿಗನೂರು, ಅಧೀಕ್ಷಕರು, ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿ, ಧಾರವಾಡ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ. ವಿಚಾರಣಾ ವರದಿಯನ್ನು ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗಾಗಿ ಸಲ್ಲಿಸತಕ್ಕದ್ದು.

**ಹೆಚ್.ಇ. ರಾಜಶೇಖರಪ್ಪ**

ಪಿ.ಆರ್.1114

ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ
ಮತ್ತು ಶಿಸ್ತು ಪ್ರಾಧಿಕಾರ.

## ಕರ್ನಾಟಕ ಲೋಕಸೇವಾ ಆಯೋಗ

**ವಿಷಯ:** 2006ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಮುತ್ತಪ್ಪ ಮಡಿವಾಳಪ್ಪ ಕೋಟಿ, ಶ್ರೀ ನಿಂಗಪ್ಪ ಎಂ ಕಲವಾಡ್, ಶ್ರೀ ರಾಜೇಸಾಬ್ ಮೆಹತಾಬ್ ಅಲ್ಮೇಲ್ ಹಾಗೂ ಶ್ರೀ ಕಲ್ಲಪ್ಪ ಗುರುಸಿದ್ದ ನಾಯ್ಕ ಇವರುಗಳು ಎಸಗಿದ ದುರಾಚಾರ ಪ್ರಕರಣ-ದಂಡನೆ ವಿಧಿಸುವ ಆದೇಶ.

**ಓದಲಾಗಿದೆ:**
1) ಶ್ರೀ ಮುತ್ತಪ್ಪ ಮಡಿವಾಳಪ್ಪ ಕೋಟಿ, ಶ್ರೀ ನಿಂಗಪ್ಪ ಎಂ ಕಲವಾಡ್, ಶ್ರೀ ರಾಜೇಸಾಬ್ ಮೆಹತಾಬ್ ಅಲ್ಮೇಲ್ ಹಾಗೂ ಶ್ರೀ ಕಲ್ಲಪ್ಪ ಗುರುಸಿದ್ದ ನಾಯ್ಕ ಇವರುಗಳ 2006ನೇ ದ್ವಿತೀಯ ಅಧಿವೇಶನಕ್ಕೆ ಸಲ್ಲಿಸಿದ ದಿನಾಂಕ: 16.09.2006 ಮತ್ತು 25.09.2006ರ ಅರ್ಜಿಗಳು.
2) ನೋಟೀಸು ಸಂಖ್ಯೆ: ಆರ್‌ಹೆಚ್‌ಎಸ್/162/06-07, ಪಿಎಸ್‌ಸಿ, ದಿನಾಂಕ: 03.02.2007.
3) ಇವರುಗಳಿಗೆ ವಿಚಾರಣಾ ನೋಟೀಸ್ ಇಪ(1)50-53/06-07/ಪಿಎಸ್‌ಸಿ, ದಿನಾಂಕ: 25.04.2007.
4) ಶ್ರೀಯುತರ ಸಮಜಾಯಿಷಿ ದಿನಾಂಕಗಳು 06.02.2007, 07.02.2007, 08.02.2007 ಹಾಗೂ 30.04.2007.
5) ಶ್ರೀ ಎಂ.ಎಸ್.ಸತ್ಯಪ್ರಕಾಶ್, ಸಹಾಯಕ ಕಾರ್ಯದರ್ಶಿರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ ಆದೇಶ ಸಂಖ್ಯೆ: ಆಡಳಿತ.45/2007-08/ಪಿಎಸ್‌ಸಿ, ದಿನಾಂಕ: 07.04.2007.
6) ವಿಚಾರಣಾಧಿಕಾರಿಯವರ ಮುಂದೆ 4 ಆರೋಪಿಗಳು ಖುದ್ದಾಗಿ ಹಾಜರಾಗಿ ನೀಡಿರುವ ಹೇಳಿಕೆಗಳು ದಿನಾಂಕ: 04.05.2007 ಮತ್ತು 25.05.2007.
7) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 01.06.2007.

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2006ರ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಬೆಳಗಾವಿ ಕೇಂದ್ರದ ಇಸ್ಲಾಮಿಯ ಬಾಲಕರ ಪ್ರೌಢಶಾಲೆಯ ಉಪಕೇಂದ್ರದಲ್ಲಿ ದಿನಾಂಕ: 22.11.2006 ರಂದು ರೆವಿನ್ಯೂ ಲೋಯರ್ ವಿಷಯದ ಪರೀಕ್ಷೆಗೆ ಹಾಜರಾಗಿದ್ದ ಅಭ್ಯರ್ಥಿಗಳಾದ 1) ಮುತ್ತಪ್ಪ ಮಡಿವಾಳ ಕೋಟಿ, ದ್ವಿತೀಯ ದರ್ಜೆ ಸಹಾಯಕರು, ಜಿಲ್ಲಾಪಂಚಾಯತ್, ಕೋರ್ಟ್ ಆವರಣ, ಬೆಳಗಾವಿ (ನೋ.ಸಂ.50348), 2) ಶ್ರೀ ನಿಂಗಪ್ಪ ಎಂ ಕಲವಾಡ್, ಗ್ರಾಮ ಲೆಕ್ಕಿಗ, ತಹಶೀಲ್ದಾರ್‌ರವರ ಕಛೇರಿ, ಸೌದತ್ತಿ-591126, ಬೆಳಗಾವಿ ಜಿಲ್ಲೆ, (ನೋ.ಸಂ.50350), 3) ಶ್ರೀ ರಾಜೇಸಾಹೇಬ್ ಮೆಹತಾಬ್ ಅಲ್ಮೇಲ್, ಫಾರೆಸ್ಟರ್, ರೇಂಜ್ ಫಾರೆಸ್ಟ್ ಆಫೀಸ್, ಚಿಕ್ಕೋಡಿ, ಬೆಳಗಾವಿ ಜಿಲ್ಲೆ, (ನೋ.ಸಂ.50357), 4) ಶ್ರೀ ಕಲ್ಲಪ್ಪ ಗುರುಸಿದ್ದ ನಾಯ್ಕ, ಗ್ರಾಮ ಲೆಕ್ಕಿಗ, ತಹಶೀಲ್ದಾರ್‌ರ ಕಛೇರಿ, ಬೆಳಗಾವಿ ಜಿಲ್ಲೆ, (ನೋ.ಸಂ.50381) ಇವರುಗಳು ಪರೀಕ್ಷಾ ಕೊಠಡಿಯಲ್ಲಿ ಪರಸ್ಪರ ಚರ್ಚಿಸುವುದರ ಮೂಲಕ ದುರ್ವರ್ತನೆಯನ್ನು ಎಸಗಿ ಶಾಂತತೆಗೆ ಭಂಗ ತಂದರೆಂದು ಸದರಿ ಉಪಕೇಂದ್ರದ ಮುಖ್ಯ ಪರಿವೀಕ್ಷಕರು ಉಲ್ಲೇಖ (2) ರಲ್ಲಿ ಓದಲಾದ ವರದಿಯಲ್ಲಿ ಮಾಡಿದ್ದ ವರದಿ ಮೇರೆಗೆ ಉಲ್ಲೇಖ (3) ರಲ್ಲಿ ಓದಲಾದ ದಿನಾಂಕ: 25.04.2007ರ ನೋಟೀಸುಗಳಲ್ಲಿ ಅವರುಗಳ ಸಮಜಾಯಿಷಿ ಕೇಳಲಾಗಿತ್ತು.

ಸದರಿ ನೋಟೀಸಿಗೆ ಉತ್ತರವಾಗಿ ಆಪಾದಿತ ಅಭ್ಯರ್ಥಿಗಳು ಉಲ್ಲೇಖ-(4) 06.02.2007, 07.02.2007, 08.02.2007 ಹಾಗೂ 30.04.2007 ರಲ್ಲಿ ಓದಲಾದ ಸಮಜಾಯಿಷಿಗಳಲ್ಲಿ ಅವರುಗಳ ವಿರುದ್ಧ ಮಾಡಲಾದ ಆರೋಪಗಳನ್ನು ನಿರಾಕರಿಸಿದ್ದ ಕಾರಣ ಸದರಿ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ಉಲ್ಲೇಖ (5) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಂ.ಎಸ್. ಸತ್ಯಪ್ರಕಾಶ್, ಸಹಾಯಕ ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಅವರನ್ನು ಪ್ರಕರಣದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರ ಮೇರೆಗೆ ಪ್ರಕರಣದ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಉಲ್ಲೇಖ (6) ರಲ್ಲಿ ಓದಲಾದ ತಮ್ಮ ವರದಿಯಲ್ಲಿ (1) ಶ್ರೀ ಮುತ್ತಪ್ಪ ಮಡಿವಾಳಪ್ಪ ಕೋಟಿ (ನೋ.ಸಂ.50348) ಮತ್ತು (2) ಶ್ರೀ ನಿಂಗಪ್ಪ ಎಂ ಕಲವಾಡ್ (ನೋ.ಸಂ.50350) ಇವರುಗಳ ಮೇಲಿನ ಆರೋಪಗಳು ಸಾಬೀತಾಗಿವೆಯೆಂದು ಆದರೆ (3) ಶ್ರೀ ರಾಜೇಸಾಬ್ ಮೆಹತಾಬ್ ಅಲ್ಮೇಲ್ (ನೋ.ಸಂ.50357) ಮತ್ತು (4) ಶ್ರೀ ಕಲ್ಲಪ್ಪ ಗುರುಸಿದ್ದ ನಾಯ್ಕ (ನೋ.ಸಂ.50381) ಇವರುಗಳ ಮೇಲಿನ ಆರೋಪಗಳು ಸಾಬೀತಾಗಿಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಆಯೋಗವು ವಿಚಾರಣಾಧಿಕಾರಿಗಳ ವರದಿಯನ್ನು ಹಾಗೂ ಪ್ರಕರಣಕ್ಕೆ ಸಂಬಂಧಿಸಿದಂತೆ ಒದಗಿಸಲಾದ ದಾಖಲೆ, ಸಾಕ್ಷ್ಯ, ಇತ್ಯಾದಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ದಿನಾಂಕ: 14.07.1993ರ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93-94/ಪಿಎಸ್‌ಸಿರ ಅನ್ವಯ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇಪ(1)/1393/2007-08/ಪಿಎಸ್‌ಸಿ, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2007**

1965ರ ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಾವಳಿಗಳ ನಿಯಮ 8 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಸಂಖ್ಯೆ: ಆಡಳಿತ 398/93-94/ಪಿಎಸ್‌ಸಿ ದಿನಾಂಕ: 14.09.1993ರ ಅಧಿಸೂಚನೆಯಂತೆ ಸದರಿ ಇಲಾಖಾ ಪರೀಕ್ಷೆಗಳಿಗೆ ಅಭ್ಯರ್ಥಿಗಳಾಗಿದ್ದ ಶ್ರೀ ಮುತ್ತಪ್ಪ ಮಡಿವಾಳಪ್ಪ ಕೋಟಿ,

(ನೋ.ಸಂ.50348) ದ್ವಿತೀಯ ದರ್ಜೆ ಸಹಾಯಕರು, ಜಿಲ್ಲಾ ಪಂಚಾಯತ್, ಕೋರ್ಟ್ ಆವರಣ, ಬೆಳಗಾವಿ–590001, ಶ್ರೀ ನಿಂಗಪ್ಪ ಎಂ ಕಲವಾಡ್ (ನೋ.ಸಂ.50350) ಗ್ರಾಮ ಲೆಕ್ಕಿಗ, ತಹಸೀಲ್ದಾರ್‌ರವರ ಕಛೇರಿ, ಸೌದತ್ತಿ–591126, ಬೆಳಗಾವಿ ಜಿಲ್ಲೆ ಇವರುಗಳ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವುದರಿಂದ ಅವರುಗಳಿಗೆ ತಲಾ 100–00 ರೂ.ಗಳ ದಂಡ ವಿಧಿಸಿದೆ ಹಾಗೂ ಶ್ರೀ ರಾಜೇಸಾಬ್ ಮೆಹತಾಬ್ ಅಲ್ಮೇಲ್ (ನೋಂಸಂ.50357) ಫಾರೆಸ್ಟರ್, ರೇಂಜ್ ಫಾರೆಸ್ಟ್ ಆಫೀಸ್, ಚಿಕ್ಕೋಡಿ, ಬೆಳಗಾವಿ ಜಿಲ್ಲೆ ಮತ್ತು ಶ್ರೀ ಕಲ್ಲಪ್ಪ ಗುರುಸಿದ್ದ ನಾಯ್ಕ (ನೋ.ಸಂ.50381) ಗ್ರಾಮ ಲೆಕ್ಕಿಗ, ತಹಶೀಲ್ದಾರರ ಕಛೇರಿ ಹುಕ್ಕೇರಿ, ತಾಲ್ಲೂಕು ಹುಕ್ಕೇರಿ, ಬೆಳಗಾವಿ ಜಿಲ್ಲೆ, ಇವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲದ ಕಾರಣ ಅವರುಗಳನ್ನು ದೋಷ ಮುಕ್ತಗೊಳಿಸಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.1119

**ಕರ್ನಾಟಕ ಲೋಕಸೇವಾ ಆಯೋಗ**

**ವಿಷಯ:** 2006ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಎಸ್.ಮಹೇಂದ್ರ, ಶ್ರೀ ಎನ್.ಎಂ.ಬಸವರಾಜು, ಶ್ರೀ ಜೆ.ವೆಂಕಟರಮಣ, ಶ್ರೀ ಶ್ರೀಶೈಲಪ್ಪ ಕಟ್ಟಿ, ಶ್ರೀ ಸುರೇಶ್ ಎಸ್ ಸಕ್ರಿ, ಶ್ರೀ ಅನ್ನದಾನೇಶ್ವರ ಗುಜರಿ ಬಿ, ಶ್ರೀ ಜೆ.ಎಸ್. ಗೋವಿಂದರೆಡ್ಡಿ, ಶ್ರೀ ಶ್ರೀಕಾಂತ, ಶ್ರೀ ಪ್ರಕಾಶ್ ಬಿ ತಗಡಿನ ಮನಿ ಇವರುಗಳು ಎಸಗಿದ ದುರಾಚಾರ ಪ್ರಕರಣ–ದಂಡನೆ ವಿಧಿಸುವ ಆದೇಶ.

**ಓದಲಾಗಿದೆ:**
1) ಶ್ರೀ ಎಸ್.ಮಹೇಂದ್ರ, ಶ್ರೀ ಎನ್.ಎಂ.ಬಸವರಾಜು, ಶ್ರೀ ಜೆ.ವೆಂಕಟರಮಣ, ಶ್ರೀ ಶ್ರೀಶೈಲಪ್ಪ ಕಟ್ಟಿ, ಶ್ರೀ ಸುರೇಶ್ ಎಸ್ ಸಕ್ರಿ, ಶ್ರೀ ಅನ್ನದಾನೇಶ್ವರ ಗುಜರಿ ಬಿ, ಶ್ರೀ ಜೆ.ಎಸ್. ಗೋವಿಂದರೆಡ್ಡಿ, ಶ್ರೀ ಶ್ರೀಕಾಂತ, ಶ್ರೀ ಪ್ರಕಾಶ್ ಬಿ ತಗಡಿನ ಮನಿ ಇವರುಗಳ 2006ರ ದ್ವಿತೀಯ ಅಧಿವೇಶನಕ್ಕೆ ಅರ್ಜಿಗಳು ಸಲ್ಲಿಸಿದ ದಿನಾಂಕಗಳು 13.09.2006,22.09.2006, 25.09.2006 ಹಾಗೂ 27.09.2006.
2) ನೋಟೀಸು ಜಾರಿ ಮಾಡಿದ ಸಂಖ್ಯೆ: ಆರ್‌ಹೆಚ್‌ಎಸ್/162/06–07, ಪಿಎಸ್‌ಸಿ, ದಿನಾಂಕ: 03.02.2007.
3) ಇವರುಗಳಿಗೆ ವಿಚಾರಣಾ ನೋಟೀಸ್ ಇಪ(1)341–345/07/ಪಿಎಸ್‌ಸಿ, ದಿನಾಂಕ: 04.06.2007.
4) ಶ್ರೀಯುತರ ಸಮಜಾಯಿಷಿ ದಿನಾಂಕಗಳು 07.02.2007, 08.02.2007, 09.02.2007, 13.02.2007 ಹಾಗೂ 14.02.2007.
5) ಶ್ರೀ ಎಂ.ಎಸ್.ಸತ್ಯಪ್ರಕಾಶ್, ಸಹಾಯಕ ಕಾರ್ಯದರ್ಶಿರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ ಆದೇಶ ಸಂಖ್ಯೆ: ಆಡಳಿತ.44/2007–08/ಪಿಎಸ್‌ಸಿ, ದಿನಾಂಕ: 07.04.2007.
6) ವಿಚಾರಣಾಧಿಕಾರಿಯವರ ಮುಂದೆ 09 ಆರೋಪಿಗಳು ಖುದ್ದಾಗಿ ಹಾಜರಾಗಿ ನೀಡಿರುವ ಹೇಳಿಕೆಗಳು ದಿನಾಂಕ: 29.06.2007 ಮತ್ತು 07.05.2007.
7) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 30.06.2007.

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2006ರ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಕೊಪ್ಪಳ ಕೇಂದ್ರದಲ್ಲಿ ಬಾಲಕರ ಸರ್ಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ದಿನಾಂಕ: 16.11.2006 ರಂದು ನಡೆದ ಅಕೌಂಟ್ಸ್ ಹೈಯರ್ ವಿಷಯದ ಪರೀಕ್ಷೆಗೆ ಅಭ್ಯರ್ಥಿಗಳಾಗಿದ್ದ ಶ್ರೀ ಎಸ್.ಮಹೇಂದ್ರ, ದ್ವಿತೀಯ ದರ್ಜೆ ಸಹಾಯಕರು, ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಕ್ವಾಲಿಟಿ ನಿಯಂತ್ರಣ ವಿಭಾಗ, ಮುನಿರಾಬಾದ್, ಕೊಪ್ಪಳ ಜಿಲ್ಲೆ, (ನೋಂ.ಸಂ.28367), ಶ್ರೀ ಎನ್.ಎಂ.ಬಸವರಾಜು, ಸಹ ಶಿಕ್ಷಕರು, ಹೆಚ್.ಪಿ.ಎಸ್, ಕಲಲ್ಬಂದಿ ಕುಷ್ಠಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ (ನೋಂ.ಸಂ.28307), ಶ್ರೀ ಜೆ.ವೆಂಕಟರಮಣ, ಗ್ರಾಮ ಲೆಕ್ಕಿಗ, ತಹಶೀಲ್ದಾರರ ಕಛೇರಿ, ಯಲಬುರ್ಗ ಕೊಪ್ಪಳ ಜಿಲ್ಲೆ, (ನೋಂ.ಸಂ.28217), ಶ್ರೀ ಶ್ರೀಶೈಲಪ್ಪ ಕಟ್ಟಿ, ಗ್ರಾಮ ಲೆಕ್ಕಿಗ, ತಹಶೀಲ್ದಾರರ ಕಛೇರಿ, ಯಲಬುರ್ಗ ಕೊಪ್ಪಳ ಜಿಲ್ಲೆ, (ನೋಂ.ಸಂ.28192), ಶ್ರೀ ಸುರೇಶ್ ಎಸ್ ಸಕ್ರಿ, ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಗಂಗಾವತಿ, ಕೊಪ್ಪಳ ಜಿಲ್ಲೆ, (ನೋಂ.ಸಂ.28202), ಶ್ರೀ ಅನ್ನದಾನೇಶ್ವರ ಗುಜರಿ ಬಿ, ಸಹಾಯಕ ಅಭಿಯಂತರರು, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು (ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ) ಕೊಪ್ಪಳ, (ನೋಂ.ಸಂ.28007), ಶ್ರೀ ಜೆ.ಎಸ್. ಗೋವಿಂದರೆಡ್ಡಿ, ದ್ವಿತೀಯ ದರ್ಜೆ ಸಹಾಯಕರು, ತಾಲ್ಲೂಕು ಸಮಾಜ ಕಲ್ಯಾಣ ಕಛೇರಿ, ಗಂಗಾವತಿ ಕೊಪ್ಪಳ ಜಿಲ್ಲೆ, (ನೋಂ.ಸಂ.28530), ಶ್ರೀ ಶ್ರೀಕಾಂತ, ದ್ವಿತೀಯ ದರ್ಜೆ ಸಹಾಯಕರು, ಆರಕ್ಷಕ ಅಧೀಕ್ಷಕರ ಕಛೇರಿ, ಕೊಪ್ಪಳ (ನೋಂ.ಸಂ.28576) ಹಾಗೂ ಶ್ರೀ ಪ್ರಕಾಶ್ ಬಿ ತಗಡಿನ ಮನಿ, ಕನ್ನಡ ಶಿಕ್ಷಕರು, ಸರ್ಕಾರಿ ಬಾಲಕಿಯರ ಪ್ರೌಢಶಾಲೆ ಅಲವಚಿಡಿ, ಕೊಪ್ಪಳ ಜಿಲ್ಲೆ (ನೋಂಸಂ.28407) ಇವರುಗಳು ಪರೀಕ್ಷಾ ಕೊಠಡಿಯಲ್ಲಿ ಮೇಲ್ವಿಚಾರಕರೊಂದಿಗೆ ಅನುಚಿತವಾಗಿ ವರ್ತಿಸಿದ್ದಲ್ಲದೆ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿರುತ್ತಿರೆಂದು ಸದರಿ ಉಪಕೇಂದ್ರದ ಮುಖ್ಯ ಪರಿವೀಕ್ಷಕರು ಉಲ್ಲೇಖ (2)

ರಲ್ಲಿ ಓದಲಾದ ವರದಿಯಲ್ಲಿ ಮಾಡಿದ್ದ ವರದಿ ಮೇರೆಗೆ ಉಲ್ಲೇಖ (3) ರಲ್ಲಿ ಓದಲಾದ ದಿನಾಂಕ: 04.06.2007ರ ನೋಟೀಸುಗಳಲ್ಲಿ ಆಪಾದಿತ ಅಭ್ಯರ್ಥಿಗಳ ಸಮಜಾಯಿಷಿ ಕೇಳಲಾಗಿತ್ತು.

ಸದರಿ ನೋಟೀಸಿಗೆ ಉತ್ತರವಾಗಿ ಅಪಾದಿತ ಅಭ್ಯರ್ಥಿಗಳು ಉಲ್ಲೇಖ (4) ರಲ್ಲಿ ಓದಲಾದ ದಿನಾಂಕ: 07.02.2007, 08.02.2007, 09.02.2007, 13.02.2007 ಹಾಗೂ 14.02.2007 ಗಳ ಸಮಜಾಯಿಷಿಗಳಲ್ಲಿ ಅವರುಗಳ ವಿರುದ್ಧ ಮಾಡಲಾದ ಆರೋಪಗಳನ್ನು ನಿರಾಕರಿಸಿದ್ದ ಕಾರಣ ಸದರಿ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ಉಲ್ಲೇಖ (5) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಎಂ.ಎಸ್.ಸತ್ಯಪ್ರಕಾಶ್, ಸಹಾಯಕ ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರ ಮೇರೆಗೆ ಪ್ರಕರಣದ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಉಲ್ಲೇಖ (7) ರಲ್ಲಿ ಓದಲಾದ ತಮ್ಮ ವರದಿಯಲ್ಲಿ ಶ್ರೀ ಎಸ್.ಮಹೇಂದ್ರ, (ನೋಂ.ಸಂ.28367), ಶ್ರೀ ಸುರೇಶ್ ಎಸ್ ಸಕ್ರಿ, (ನೋಂ.ಸಂ.28202), ಶ್ರೀ ಪ್ರಕಾಶ್ ಬಿ ತಗಡಿನ ಮನಿ, (ನೋಂಸಂ.28407) ಶ್ರೀ ಎಂ.ಎಸ್.ಬಸವರಾಜು, (ನೋಂ.ಸಂ.28307), ಶ್ರೀ ಜೆ.ಎಸ್. ಗೋವಿಂದರೆಡ್ಡಿ, (ನೋಂ.ಸಂ.28530), ಇವರುಗಳ ಮೇಲಿನ ಆರೋಪಗಳು ಸಾಬೀತಾಗಿವೆಯೆಂದೂ, ಆದರೆ ಅನ್ನದಾನೇಶ್ವರ ಗುಜರಿ ಬಿ, (ನೋಂ.ಸಂ.28007), ಶ್ರೀ ಜೆ.ವೆಂಕಟರಮಣ, ಶ್ರೀ ಶ್ರೀಶೈಲಪ್ಪ ಕಟ್ಟಿ (ನೋಂ.ಸಂ.28192) ಹಾಗೂ ಶ್ರೀ ಶ್ರೀಕಾಂತ, (ನೋಂ.ಸಂ.28576) ಇವರುಗಳ ಮೇಲಿನ ಆರೋಪಗಳು ಸಂಬಂಧಿಸಿದ ಪರೀಕ್ಷಾ ಕೊಠಡಿ ಸಂವೀಕ್ಷಕರು ಹಾಗೂ ಪರೀಕ್ಷಾ ಕೇಂದ್ರ ಮೇಲ್ವಿಚಾರಕರುಗಳ ಸಾಕ್ಷ್ಯದಲ್ಲಿ ಸತ್ಯವೆಂದು ಪ್ರಮಾಣೀಕರಿಸಿರುವುದರಿಂದ ಈ ಎಲ್ಲಾ ಆಪಾದಿತರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುತ್ತವೆಯೆಂದು ಅಭಿಪ್ರಾಯಪಟ್ಟಿರುತ್ತಾರೆ.

ಆಯೋಗವು ವಿಚಾರಣಾಧಿಕಾರಿಗಳ ವರದಿಯನ್ನು ಹಾಗೂ ಪ್ರಕರಣಕ್ಕೆ ಸಂಬಂಧಿಸಿದಂತೆ ಒದಗಿಸಲಾದ ದಾಖಲೆ, ಸಾಕ್ಷ್ಯ, ಇತ್ಯಾದಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಆಯೋಗದ ದಿನಾಂಕ: 14.07.1993ರ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93–94/ಪಿಎಸ್‌ಸಿರ ಅನ್ವಯ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇಪ(1)/1394/2007–08/ಪಿಎಸ್‌ಸಿ, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2007**

1965ರ ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಾವಳಿಗಳ ನಿಯಮ 8 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಸಂಖ್ಯೆ: ಆಡಳಿತ 398/93–94/ಪಿಎಸ್‌ಸಿ ದಿನಾಂಕ: 14.09.1993ರ ಅಧಿಸೂಚನೆಯಂತೆ ಸದರಿ ಇಲಾಖಾ ಪರೀಕ್ಷೆಗಳಿಗೆ ಅಭ್ಯರ್ಥಿಗಳಾಗಿದ್ದ ಶ್ರೀ ಎಸ್.ಮಹೇಂದ್ರ, (ನೋಂ. ಸಂ:28367) ದ್ವಿತೀಯ ದರ್ಜೆ ಸಹಾಯಕರು, ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಕ್ವಾಲಿಟಿ ನಿಯಂತ್ರಣ ವಿಭಾಗ, ಮುನಿರಾಬಾದ್, ಕೊಪ್ಪಳ ಜಿಲ್ಲೆ, ಶ್ರೀ ಎನ್.ಎಂ.ಬಸವರಾಜು, (ನೋಂ.ಸಂ.28307) ಸಹ ಶಿಕ್ಷಕರು, ಹೆಚ್.ಪಿ.ಎಸ್, ಕಲಲ್ಬಂದಿ ಕುಷ್ಠಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ, ಶ್ರೀ ಜೆ.ವೆಂಕಟರಮಣ, (ನೋಂ.ಸಂ.28217) ಗ್ರಾಮ ಲೆಕ್ಕಿಗ, ತಹಶೀಲ್ದಾರರ ಕಛೇರಿ, ಯಲಬುರ್ಗ ಕೊಪ್ಪಳ ಜಿಲ್ಲೆ, ಶ್ರೀ ಶ್ರೀಶೈಲಪ್ಪ ಕಟ್ಟಿ, (ನೋಂ.ಸಂ.28192) ಗ್ರಾಮ ಲೆಕ್ಕಿಗ, ತಹಶೀಲ್ದಾರರ ಕಛೇರಿ, ಯಲಬುರ್ಗ ಕೊಪ್ಪಳ ಜಿಲ್ಲೆ, ಶ್ರೀ ಸುರೇಶ್ ಎಸ್ ಸಕ್ರಿ, (ನೋಂ.ಸಂ.28202) ಕೃಷಿ ಸಹಾಯಕರು, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಗಂಗಾವತಿ, ಕೊಪ್ಪಳ ಜಿಲ್ಲೆ, ಶ್ರೀ ಅನ್ನದಾನೇಶ್ವರ ಗುಜರಿ ಬಿ, (ನೋಂ.ಸಂ.28007) ಸಹಾಯಕ ಅಭಿಯಂತರರು, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು (ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ) ಕೊಪ್ಪಳ, ಶ್ರೀ ಜೆ.ಎಸ್. ಗೋವಿಂದರೆಡ್ಡಿ, (ನೋಂ.ಸಂ.28530) ದ್ವಿತೀಯ ದರ್ಜೆ ಸಹಾಯಕರು, ತಾಲ್ಲೂಕು ಸಮಾಜ ಕಲ್ಯಾಣ ಕಛೇರಿ, ಗಂಗಾವತಿ ಕೊಪ್ಪಳ ಜಿಲ್ಲೆ, ಶ್ರೀ ಶ್ರೀಕಾಂತ, (ನೋಂ.ಸಂ.28576) ದ್ವಿತೀಯ ದರ್ಜೆ ಸಹಾಯಕರು, ಆರಕ್ಷಕ ಅಧೀಕ್ಷಕರ ಕಛೇರಿ, ಕೊಪ್ಪಳ ಹಾಗೂ ಶ್ರೀ ಪ್ರಕಾಶ್ ಬಿ ತಗಡಿನ ಮನಿ, ಕನ್ನಡ ಶಿಕ್ಷಕರು, ಸರ್ಕಾರಿ ಬಾಲಕಿಯರ ಪ್ರೌಢಶಾಲೆ ಅಲವಚಿಡಿ, ಕೊಪ್ಪಳ ಜಿಲ್ಲೆ (ನೋಂಸಂ.28407) ಇವರುಗಳ ವಿರುದ್ಧ ಆರೋಪ ಸಾಬೀತಾಗಿರುವುದರಿಂದ ಅವರುಗಳಿಗೆ ತಲಾ 100–00 ರೂ.ಗಳ ದಂಡನೆಯನ್ನು ವಿಧಿಸಿದೆ.

ಆಯೋಗದ ಆದೇಶದ ಮೇರೆಗೆ,
ಪಿ.ಆರ್.1120
ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act 2003-Clarification under Section 59(4) regarding the tax applicable on 'wood based impregnated compressed laminates (compreg boards)'.

**Ref:** Application dated: 30.04.2007 and 21.06.2007 of M/s Mysore Polymers Pvt. Ltd., Shed No. E 10 to E 12, Post Box No.18, Industrial Estate, Ramanagaram-571 511, (Bangalore District).

In its application dated: 30.04.2007 and 21.06.2007 cited above, M/s Mysore Polymers Pvt. Ltd., Shed No E 10 to E 12, Post Box No.18, Industrial Estate, Ramanagaram-571 511, (Bangalore District), has sought clarification regarding rate of tax applicable on 'wood based impregnated compressed laminates (compreg boards)'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.25/07-08, DATED: 31st JULY 2007**

It is hereby clarified that 'wood based impregnated laminates (compreg boards)' are taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**
P.R.1121 Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act 2003-Clarification under Section 59(4) regarding the tax applicable on "herbal based beauty care products".

**Ref:** Application dated: 11.06.2007 of M/s K.K.Marketing, For Banjara's Herbal Cosmetics For Karnataka, No.690, 5th Main, Srinagar, B.S.K. 1st Stage, 1st Block, Bangalore-560 040.

In their application dated: 11.06.2007 cited above, M/s K.K.Marketing, (Super Stockists and C&F Agents) For Banjara's Herbal Cosmetics For Karnataka, No.690, 5th Main, Srinagar, B.S.K. 1st Stage, 1st Block, Bangalore-560 040 has sought clarification regarding rate of tax applicable on "herbal based beauty care products".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.84/07-08, DATED: 2nd August 2007**

It is hereby clarified that herbal based beauty care products namely 'multhani matti', 'tulsi powder', 'touch & glow', 'orange peel powder', oatmeal powder', 'rosepetal powder', 'ambihaldi powder', 'amla powder', 'bramhi powder', 'methi powder', 'shama henna hair pack', neem powder', 'hibiscus powder', 'henna powder', 'arita powder', 'shikakai powder', 'kashuriturmeric powder', 'pudeena powder', 'rose water' and 'face packs' are taxable at 12.5% under Section 4(1)(b) of the Karnataka Value added Tax Act, 2003.

**B.A. HARISH GOWDA**
P.R.1122 Commissioner of Commercial Taxes,
(Karnataka), Bangalore.

## ಸಮಾಜ ಕಲ್ಯಾಣ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಸಕಇ 96 ಎಸ್‌ಎಡಿ 2007, ಬೆಂಗಳೂರು, ದಿನಾಂಕ: 31ನೇ ಜುಲೈ 2007**

ವಿಚಾರಣಾ ಆಯೋಗದ ಅಧಿನಿಯಮ 1952, (1952ರ ಕೇಂದ್ರ ಅಧಿನಿಯಮ ಸಂಖ್ಯೆ: 60)ರ 3ನೇ ಪ್ರಕರಣದ ಮೇರೆಗೆ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಕಇ 227 ಎಸ್‌ಎಡಿ 03, ದಿನಾಂಕ: 24.09.2005 ರಲ್ಲಿ ಕರ್ನಾಟಕ ಸರ್ಕಾರವು ಮೀಸಲಾತಿ ಅವಕಾಶವು ನ್ಯಾಯಸಮ್ಮತವಾಗಿ ದೊರೆಯದಿರುವ ಕರ್ನಾಟಕ ರಾಜ್ಯದಲ್ಲಿನ ಅನುಸೂಚಿತ ಜಾತಿಗಳ ನಿರ್ದಿಷ್ಟ ಜಾತಿಗಳು, ಜನಾಂಗಗಳು ಹಾಗೂ ಬುಡಕಟ್ಟುಗಳನ್ನು ಗುರುತಿಸುವುದಕ್ಕೆ ಮತ್ತು ಅವರು ರಾಜ್ಯದಲ್ಲಿನ ಅನುಸೂಚಿತ ಜಾತಿಗಳು ಮತ್ತು ಇತರ ಪ್ರವರ್ಗಗಳೊಂದಿಗೆ ಸ್ಪರ್ಧಿಸಲು ಅವರನ್ನು ಸಮರ್ಥಗೊಳಿಸುವುದಕ್ಕೆ ಸಂಬಂಧಿಸಿದಂತೆ ತೆಗೆದುಕೊಳ್ಳಬೇಕಾದ ಎಲ್ಲಾ ನಿರ್ದಿಷ್ಟ ಕ್ರಮಗಳ ಬಗ್ಗೆ ಸರ್ಕಾರಕ್ಕೆ ವರದಿ ನೀಡಲು ನೇಮಕ ಮಾಡಲಾದ ಮಾನ್ಯ ನ್ಯಾಯಮೂರ್ತಿ ಎ.ಜೆ.ಸದಾಶಿವ (ನಿವೃತ್ತ) ಅವರನ್ನೊಳಗೊಂಡ ವಿಚಾರಣಾ ಆಯೋಗದ ಕಾಲಾವಧಿಯು ದಿನಾಂಕ: 24.09.06ಕ್ಕೆ ಮುಕ್ತಾಯಗೊಂಡಿದ್ದರಿಂದ, ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಕಇ 135 ಎಸ್‌ಎಡಿ 06, ದಿನಾಂಕ: 23.09.06 ರಲ್ಲಿ ದಿನಾಂಕ: 24.09.07 ರವರೆಗೆ ವಿಸ್ತರಿಸಿ ಆದೇಶಿಸಲಾಯಿತು. ವಿಸ್ತರಿಸಿದ ಕಾಲಾವಕಾಶದೊಳಗೆ ವರದಿ ಸಲ್ಲಿಸಲು ಸಾಧ್ಯವಾಗದಿರುವುದರಿಂದ, ಆಯೋಗದ ಕಾಲಾವಧಿಯನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿದೆ. ಅಂತೆಯೇ ನ್ಯಾಯಮೂರ್ತಿ ಎ.ಜೆ.ಸದಾಶಿವ ವಿಚಾರಣಾ ಆಯೋಗದ (ಕರ್ನಾಟಕ ಪರಿಶಿಷ್ಟ ಜಾತಿಗಳ ಸಂವಿಧಾನಿಕ ಸೌಲಭ್ಯಗಳು ಹಾಗೂ ಅವುಗಳ ಹಂಚಿಕೆಯಲ್ಲಿ ತಾರತಮ್ಯ ಪರಿಶೀಲನೆ) ಕಾಲಾವಧಿಯನ್ನು ದಿನಾಂಕ: 24.09.07 ರಿಂದ 31.12.2008 ರವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಂ. ಚಿದಾನಂದಸ್ವಾಮಿ**

ಪಿ.ಆರ್.1123 ಸರ್ಕಾರದ ಅಧೀನ ಕಾರ್ಯದರ್ಶಿ–2,

ಸಮಾಜ ಕಲ್ಯಾಣ ಇಲಾಖೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

**ಸಂಖ್ಯೆ: ಎಲ್‌ಆರ್‌ಎಫ್ (ಎ) ಸಿ.ಆರ್–02/2007–08, ದಿನಾಂಕ: 3ನೇ ಆಗಸ್ಟ್ 2007**

**ವಿಷಯ:** ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚೂಡಸಂದ್ರ ಗ್ರಾಮದ ಸ.ನಂ.47/3 ರಲ್ಲಿ 0–38 ಗುಂಟೆ ಹಾಗೂ ರಾಯಸಂದ್ರ ಗ್ರಾಮದ ಸ.ನಂ.123/1 ರಲ್ಲಿ 1–36 ಎ.ಗುಂ. ರಲ್ಲಿನ ಒಟ್ಟು 2–34 ಎಕರೆ:ಗುಂಟೆ, ವಿಸ್ತೀರ್ಣ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ "ಭಾರತ್ ಸೊಸೈಟಿ", ಬೆಂಗಳೂರು ರವರು ದಾನವಾಗಿ ಪಡೆಯಲು ಕಲಂ 109 ರಡಿಯಲ್ಲಿ ಅನುಮತಿ ಕೋರಿರುವ ಬಗ್ಗೆ.

"ಭಾರತ್ ಸೊಸೈಟಿ" ಕೇರಾಫ್ ಸೋಫಿಯಾ ಹೈಸ್ಕೂಲ್, 70, ಪ್ಯಾಲೇಸ್ ರೋಡ್, ಬೆಂಗಳೂರು–1 ರವರು ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚೂಡಸಂದ್ರ ಗ್ರಾಮದ ಸ.ನಂ.47/3 ರಲ್ಲಿ 0–38 ಗುಂಟೆ ಹಾಗೂ ರಾಯಸಂದ್ರ ಗ್ರಾಮದ ಸ.ನಂ.123/1 ರಲ್ಲಿ 1–36 ಎ.ಗುಂ. ರಲ್ಲಿನ ಒಟ್ಟು 2–34 ಎಕರೆ:ಗುಂಟೆ, ವಿಸ್ತೀರ್ಣ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ದಾನವಾಗಿ ಪಡೆಯಲು ನಮೂನೆ–15ಎ ರಲ್ಲಿ ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎಎ ರಲ್ಲಿ ತಹಶೀಲ್ದಾರ್, ಆನೇಕಲ್ ತಾಲ್ಲೂಕು ರವರು ಸಲ್ಲಿಸಿರುವ ಚೆಕ್ ಲಿಸ್ಟ್‌ನಲ್ಲಿ ನೀಡಿದ ಮಾಹಿತಿ ಅನುಸರಿಸಿ, ಪ್ರಸ್ತಾಪಿತ ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚೂಡಸಂದ್ರ ಗ್ರಾಮದ ಸ.ನಂ.47/3 ರಲ್ಲಿ 0–38 ಗುಂಟೆ ಹಾಗೂ ರಾಯಸಂದ್ರ ಗ್ರಾಮದ ಸ.ನಂ.123/1 ರಲ್ಲಿ 1–36 ಎ.ಗುಂ. ರಲ್ಲಿನ ಒಟ್ಟು 2–34 ಎಕರೆ:ಗುಂಟೆ, ವಿಸ್ತೀರ್ಣ ಜಮೀನನ್ನು ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರಡಿ ಅನುಮತಿ ನೀಡಲು ವರದಿ ಮಾಡಿರುತ್ತಾರೆ.

ಸದರಿ ಸಂಸ್ಥೆಯು ಉಪನೋಂದಣಾಧಿಕಾರಿಗಳು, ಮೈಸೂರು ರವರ ಕಛೇರಿಯಲ್ಲಿ ನಂ.131/1963–64 ದಿನಾಂಕ: 31.01.1964 ರಂದು ನೋಂದಾಯಿಸಲ್ಪಟ್ಟಿದೆ.

ಪ್ರಸ್ತಾಪಿತ ಜಮೀನುಗಳು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ದಾನವಾಗಿ ಪಡೆಯಲು ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (i) (ii) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಸರ್ಜಾಪುರ ಹೋಬಳಿ, ಚೂಡಸಂದ್ರ ಗ್ರಾಮದ ಸ.ನಂ.47/3 ರಲ್ಲಿ 0–38 ಗುಂಟೆ ಹಾಗೂ ರಾಯಸಂದ್ರ ಗ್ರಾಮದ ಸ.ನಂ.123/1 ರಲ್ಲಿ 1–36 ಎ.ಗುಂ. ರಲ್ಲಿನ ಒಟ್ಟು 2–34 ಎಕರೆ:ಗುಂಟೆ,

ವಿಸ್ತೀರ್ಣ ಜಮೀನನ್ನು "ಭಾರತ್ ಸೊಸೈಟಿ" ಬೆಂಗಳೂರು ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (i) (ii) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ. ವ್ಯಶಾಇ 47 ಶಾಸನ 2001, ಬೆಂಗಳೂರು, ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 02 ಯೂನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಅದರಂತೆ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಪ್ರಸ್ತಾಪಿತ ಸಂಸ್ಥೆಗೆ ಅನುಮತಿ ನೀಡಿದೆ.

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಶೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3) ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಚಟುವಟಿಕೆಗಳಿಗೆ ಉಪಯೋಗಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4) ಈ ಜಮೀನುಗಳನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳಿದ್ದಲ್ಲಿ ಸಕ್ರಮಗೊಳಿಸಿಕೊಳ್ಳುವ ಷರತ್ತಿಗೆ ಒಳಪಡಿಸಿದೆ.
5) ಈ ಜಮೀನುಗಳನ್ನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ / ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6) ಈ ಪ್ರಾಧಿಕಾರದಿಂದ 2 ಯೂನಿಟ್‌ಗಿಂತ ಹೆಚ್ಚಾಗಿ ಸಂಸ್ಥೆ ಜಮೀನು ಹೊಂದಲು ಅನುಮತಿ ಪಡೆದುಕೊಂಡಿದ್ದಲ್ಲಿ ಈಗ ನೀಡುತ್ತಿರುವ ಅನುಮತಿಯು ಸೇರಿದಂತೆ ಹಾಗೂ ಅಕ್ರಮವೆನಿಸಿದ ದಾಖಲೆಗಳ ಮೂಲಕ ಅನುಮತಿ ಪಡೆದಿದ್ದಲ್ಲಿ ಈಗ ನೀಡುತ್ತಿರುವ ಅನುಮತಿಯು ತನಗೆ ತಾನೇ ರದ್ದುಗೊಳ್ಳುತ್ತದೆ.
7) ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ನೀಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
8) ಪ್ರಶ್ನಿತ ಜಮೀನನ್ನು ಇತ್ತೀಚಿನ ಮಾರುಕಟ್ಟೆ ಬೆಲೆಗೆ ಮಾರಾಟ ಮಾಡತಕ್ಕದ್ದು.
9) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.1124

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ: ಕಾಪಕಾ:ಎಫ್‌ಸಿ:51/2007, ದಿನಾಂಕ: 16ನೇ ಆಗಸ್ಟ್ 2007**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| 1) ಶ್ರೀಮತಿ ಸೀತಮ್ಮ ಕೋಂ ಲೇಟ್ ಸೂರಯ್ಯ<br>ವಯಸ್ಸು ಸುಮಾರು 45 ವರ್ಷ,<br>2) ಶ್ರೀ ಉಮೇಶ ಬಿನ್ ಲೇಟ್ ಸೂರಯ್ಯ,<br>ವಯಸ್ಸು ಸುಮಾರು 19 ವರ್ಷ,<br>ವಾಸ: ಹೊಸಳ್ಳಿ, ಬೆಳವಿನಗೊಡಿಗೆ, ಕೊಪ್ಪ ತಾಲ್ಲೂಕು,<br>ಚಿಕ್ಕಮಗಳೂರು ಜಿಲ್ಲೆ. | | 1) ಹೆಚ್.ಆರ್.ಶೇಷಣ್ಣಗೌಡ ಬಿನ್ ರಾಮೇಗೌಡ<br>ವಯಸ್ಸು ಸುಮಾರು 51 ವರ್ಷ,<br>ಕನ್ನಳ್ಳ, ಬೆಳವಿನಗೊಡಿಗೆ, ಕೊಪ್ಪ ತಾಲ್ಲೂಕು,<br>ಚಿಕ್ಕಮಗಳೂರು ಜಿಲ್ಲೆ, |

**ಪ್ರಕಟಣೆ**

ಸೂರಯ್ಯ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 10.4.2006 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಹೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಎನ್. ರಾಮಕೃಷ್ಣ**

ಪಿ.ಆರ್.1126 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–1, ಚಿಕ್ಕಮಗಳೂರು.

**ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಮುಖ್ಯ ಇಂಜಿನೀಯರರ ಕಛೇರಿ, ಸಣ್ಣ ನೀರಾವರಿ (ಉ) ವಲಯ, ವಿಜಾಪೂರ**

**ಅಧಿಸೂಚನೆ ಸಂಖ್ಯೆ: ಮುಇ:ಸನೀ:(ಉ):ವ:ವಿಜಾ:ಸಿ:2:2007–08/6480, ದಿನಾಂಕ: 10ನೇ ಆಗಸ್ಟ್ 2007**

ಈ ಕಛೇರಿಯಲ್ಲಿರುವ ಶ್ರೀ ಡಿ.ಎಲ್.ತೇರಗಾಂವ ಉಪಮುಖ್ಯ ಇಂಜಿನೀಯರರು ಇವರಿಗೆ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸನೀಇ:114 ಸೇಎಸು 2007, ದಿನಾಂಕ: 25.07.2007 ರನ್ವಯ ಕಾರ್ಯನಿರ್ವಾಹಕ ಅಭಿಯಂತರು ಎಂದು ಬಡ್ತಿ ಹೊಂದಿದ್ದು, ದಿನಾಂಕ: 26.07.2007ರ ಪೂರ್ವಾಹ್ನದಂದು ಬಿಡುಗಡೆ ಹೊಂದಿದ ಪ್ರಯುಕ್ತ ಮಾಹಿತಿ ಹಕ್ಕು ಅಧಿನಿಯಮ 2005ರ ಅಡಿಯಲ್ಲಿ ಸೆಕ್ಷನ್–5 (1) ರನ್ವಯ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಸೆಕ್ಷನ್ 5 (2) ರನ್ವಯ ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಎಂದು ಈ ಕೆಳಗೆ ಕಾಣಿಸಿದಂತೆ ನೇಮಕ ಮಾಡಲಾಗಿದೆ.

| ಸಂಖ್ಯೆ | ಕಛೇರಿಯ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) |
|---|---|---|---|
| 1 | ಮುಖ್ಯ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ (ಉತ್ತರ) ವಲಯ ವಿಜಾಪೂರ | ಶ್ರೀ ಆರ್.ಬಿ.ಪಾಟೀಲ ಉಪಮುಖ್ಯ ಇಂಜಿನೀಯರರು, ಸಣ್ಣ ನೀರಾವರಿ (ಉ) ವಲಯ, ವಿಜಾಪೂರ | ಶ್ರೀ ಜೆ.ಎಂ.ಬಾಗವಾನ ತಾಂತ್ರಿಕ ಸಹಾಯಕರು ಸಣ್ಣ ನೀರಾವರಿ (ಉ) ವಲಯ, ವಿಜಾಪೂರ |

**ಜಿ. ಗುರುಪ್ರಸಾದ**

ಪಿ.ಆರ್.1125 ಮುಖ್ಯ ಇಂಜಿನೀಯರರು,
ಸಣ್ಣ ನೀರಾವರಿ (ಉ) ವಲಯ, ವಿಜಾಪೂರ.

**PUBLIC WORKS DEPARTMENT**

**Pre qualification Notification**

**No: EE/BLD-1/JE-2/SKSJTI Annexe/PQ/2007-08/98, Dated: 6th August 2007**

Invitation for pre-qualification for the **Work of Construction of Annexe Building (3 Stages) for SKSJTI at Dr.B.R.Ambedkar Veedhi, Bangalore-560 001.**

1. The Government of Karnataka, Public Works Department propose to take up the **Work of Construction of Annexe Building (3 Stages) for SKSJTI at Dr.B.R.Ambedkar Veedhi, Bangalore-560 001.**
2. The KPWD herein after described as "The Employer", intends to pre-qualify Class-I Contractors/Reputed Firms/Companies, registered in any State Government/Union Territory/ KPWD/CPWD/MES for the **Work of Construction of Annexe Building (3 Stages) for SKSJTI at Dr.B.R.Ambedkar Veedhi, Bangalore-560 001.**
3. The structure would comprise of Basement floor, Ground Floor and Four upper floors. The total area for proposed construction is **13200 Sqm.** The Basement floor is proposed for Work shops and parking. Ground floor and four upper floors are for Class rooms, Laboratories and Administrative offices of the Engineering College.
   The estimated cost of the project is approximately **Rs.13.50 Crores.**
4. The work would include all Civil and Structural Works, Electrical Works including Fire Fighting System, DG Sets, Transformers, Lifts etc.,
5. The Pre-qualification shall be based on an objective evaluation of details, regarding past performance, Technical and Financial Capabilities and resourcefulness of the Contractors/

Firms/Companies, with proven track record in building construction projects and will be evaluated by the Commissionerate of tenders, as per the standing orders of the Government of Karnataka.

6. Only Contractor/Firms/Companies pre qualified under this procedure will be invited to bid at a subsequent date.
7. The Contractor/Firms/Companies shall have executed a multistoried building with minimum of four floors costing not less than 30% of the amount put to tender with an annual turn over of Rs.6.75 Crores per year in any two years during past five years (2002-03 to 2006-07)
8. The Contractor/Firms/Companies shall hold a Banker's Solvency Certificate of minimum of 25% of the cost of the work exclusively obtained in respect of this work and valid till the expected date of completion of this work.
9. Interested Applicants may obtain the prequalification document from the Executive Engineer, No.1 Buildings Division, KPWD, SJP Campus, Bangalore-560 001 by enclosing a demand draft of Rs.5000/- + Taxes non-refundable from 20.8.2007 to 5.9.2007 between 10:00 Hours to 17.30 Hours on all working days. The D.D. shall be drawn in favour of the **"Executive Engineer, No.1 Buildings Division, KPWD, Bangalore"**, payable at Bangalore KPWD will despatch the document by registered airmail/registered post/Speed Post, but under no circumstances will it be held responsible for late delivery or loss of the document so mailed through the Indian Postal Department. The request for the pre qualification document must clearly state " Request for Pre qualification document for the proposed construction of " **Work of Construction of Annexe Building (3 Stages) for SKSJTI at Dr.B.R.Ambedkar Veedhi, Bangalore 560 001".**
10. An Additional amount of **Rs.250/-** has to be remitted towards postage charges if the request for the prequalification document is through POST.
11. Applications for pre qualification shall be received in sealed envelopes, which must be either delivered by hand or by Speed Post or by registered post of the Indian Postal Department to the Executive Engineer, No.1 Buildings Division, KPWD, SJP Campus, Bangalore-560 001, so as to reach him not later than **16.00 Hrs on 6.9.2007** and should be clearly marked **"Application for pre qualification document for the Proposed Work of Construction of Annexe Building (3 Stages) for SKSJTI at Dr.B.R.Ambedkar Veedhi, Bangalore-560 001".** Applications received after the due date and time will not be considered.
12. KPWD reserves the right to qualify or deny pre qualification of any or all applicants without assigning any reasons.
13. Applicants will be informed, in due course, of the results of their application.

**K.M. MAHENDRA PRASAD**
Executive Engineer (i/c)
No.1, Buildings Division, KPWD, SJP Campus,
Bangalore-01.

P.R.1127

**DEPARTMENT OF PORTS & INLAND WATER TRANSPORT, KARWAR**

**SECTION-I**

**INVITATION FOR QUALIFICATION**

**No. PIWT-22/DEV-II/2007, Dated: 20th August 2007**

**Invitation for Qualification for DEVELOPMENT OF MODERN DEEP SEA PORT AT KARWAR ON THE COASTLINE OF KARNATAKA MARITIME STATE on Build, Own, Operate and Transfer (BOOT) basis.**

**The** ***DIRECTOR OF PORTS & INLAND WATER TRANSPORT, GOVERNMENT OF KARNATAKA, KARWAR-581302, UTTARA KANNADA DISTRICT*** Invites Applications from interested parties (Applicants) in accordance with the Request for Qualification (RFQ) Document in order to shortlist competent Applicants who can subsequently bid for the Project as per Request for Proposal (RFP) Documents.

The Government of Karnataka is desirous of entrusting the project of **DEVELOPMENT OF MODERN DEEP SEA PORT AT KARWAR ON THE COASTLINE OF KARNATAKA MARITIME STATE on Build, Own, Operate and Transfer (BOOT) basis.**

The RFQ Document containing Profile of the Project, Instructions to Applicants and Evaluation Criteria may be obtained on any working day during 10.00 hours to 16.00 hours IST from the office of the ***DIRECTOR OF PORTS & INLAND WATER TRANSPORT, KARWAR-581302, UTTARA KANNADA DISTRICT, KARNATAKA STATE*** **on submission of a demand draft (non refundable) of Rs.25,000/- drawn in favour of** ***DIRECTOR OF PORTS & INLAND WATER TRANSPORT*** **and payable at Karwar. The RFQ Documents could also be downloaded by the eligible Bidders from the** ***DEPARTMENT OF PORTS & INLAND WATER TRANSPORT, KARWAR*** **website (www.karnatakaports.in) and in such a case, the cost of the Document viz., Rs.25,000/- (Rupees twentyfive thousand only) in the form of demand draft, shall be submitted along with their application.**

Sale Period: **From 27.08.2007 to 01.10.2007**on any working day from 10.00 hours to 16.00 hours IST.

The completed Application in the required format containing all the information requested in the RFQ Document shall be submitted before 16.00 hrs. IST on 31.10.2007 to the Office of the ***DIRECTOR OF PORTS & INLAND WATER TRANSPORT, KARWAR-581302, UTTARA KANNADA DISTRICT, KARNATAKA STATE, INDIA.***The validity of the application shall be 210 days from the last date of submission of Application.

**Time schedule for different activities upto the announcement of short listed applicants is as under:**

1. Sale of RFQ Document : 27.08.2007 to 01.10.2007.
2. Last date for receiving queries regarding RFQ : 15.10.2007
3. Pre-Application conference : 18.10.2007
4. Last date for submission of Applications : 31.10.2007

The RFQ Document may be collected by an Authorized representative. The RFQ will not be sent by post.

DIRECTOR OF PORTS & INLAND WATER
TRANSPORT, KARWAR.

P.R.1128

**GOVERNMENT OF KARNATAKA**

**DIRECTORATE OF ECONOMICS AND STATISTICS BANGALORE-1**

**Consumer Price Index Numbers for Industrial Workers**

**No. DES 25 PWX 2007** **Base: 1987-88=100** **Month: June 2007**

**State: Karnataka** **Date : 23-08-2007**

| | Group/Sub-Group | Bell-ary | Bha-dra-vathi | Da-van-gere | Dan-deli | Gulba-rga | Hari-har | Has-san | Man-dya | Manga-lore | Rai-chur | Tum-kur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| **I.** | **FOOD:** | | | | | | | | | | | |
| | (a) Cereals & Products | 407 | 459 | 443 | 388 | 383 | 396 | 394 | 410 | 332 | 390 | 417 |
| | (b) Pulses & Products | 375 | 410 | 432 | 449 | 354 | 389 | 416 | 455 | 403 | 382 | 415 |
| | (c) Oils & Fats | 267 | 303 | 274 | 312 | 261 | 293 | 267 | 297 | 246 | 335 | 283 |
| | (d) Meat, Fish & Eggs | 418 | 468 | 436 | 437 | 470 | 405 | 396 | 441 | 612 | 482 | 423 |
| | (e) Milk & Products | 361 | 299 | 347 | 334 | 312 | 392 | 278 | 366 | 311 | 332 | 304 |
| | (f) Condiments & Spices | 358 | 376 | 431 | 464 | 341 | 435 | 373 | 332 | 338 | 362 | 379 |
| | (g) Vegetables & Fruits | 356 | 428 | 533 | 578 | 391 | 398 | 402 | 513 | 413 | 285 | 561 |
| | (h) Other Food | 278 | 396 | 373 | 397 | 319 | 286 | 312 | 294 | 289 | 326 | 327 |
| | **FOOD GROUP INDEX** | **367** | **407** | **416** | **411** | **356** | **374** | **359** | **395** | **369** | **369** | **388** |
| **II.** | Pan, Supari, Tobacco & Intoxicants | 354 | 349 | 415 | 340 | 574 | 499 | 381 | 477 | 292 | 372 | 403 |
| **III.** | Fuel & Light | 370 | 328 | 333 | 457 | 320 | 343 | 356 | 333 | 291 | 481 | 300 |

